ಮಹಾಶಿವರಾತ್ರಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆ ದನಗಳ ಪ್ರದರ್ಶನದಲ್ಲಿ ಆಯ್ಕೆಯಾದ ಉತ್ತಮ ರಾಸುಗಳನ್ನು ತ್ರಿವಿಧ ದಾಸೋಹಮೂರ್ತಿಗಳಾದ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ವೀಕ್ಷಿಸುತ್ತಿರುವುದು.



**ದಾಸೋಹಕ್ಕೆ ಶ್ರೀ ಸಿದ್ಧಗಂಗಾ ಮಠ ಪ್ರಸಿದ್ಧಿ.**

ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವ ಪ್ರತಿಷ್ಠಾನ ನಿರ್ಮಿಸುತ್ತಿರುವ ಬೃಹತ್ ಪ್ರಸಾದ ನಿಲಯದ ಒಂದು ಪಾರ್ಶ್ವ ನೋಟ. 3,500 ವಿದ್ಯಾರ್ಥಿಗಳು ಕುಳಿತು ಪ್ರಸಾದ ಸ್ವೀಕರಿಸಬಹುದು.

ಈ ಪುಣ್ಯ ಸ್ಮಾರಕಕ್ಕೆ ಉದಾರವಾಗಿ ಕಾಣಿಕೆ ನೀಡಬೇಕಾಗಿ ಕೋರುತ್ತೇವೆ.

ಡಾ| ಎಂ. ಸಿ. ಮೋದಿ,
ಅಧ್ಯಕ್ಷರು,

ಬಿ. ಎಸ್. ಮುದ್ದಪ್ಪ,
ಉಪಾಧ್ಯಕ್ಷರು,

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲೆ -572 104.

# ಸಿದ್ಧಗಂಗಾ

ಸಂಪುಟ-30.  ಸಂಚಿಕೆ-3.  ಮಾರ್ಚಿ-1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಣ್ಣಿಗೆ ರೂಪಾಗಿರುವೆ ಕಿವಿಗೆ ನಾದವಾದೆ
ಹೃನ್ಮನದಿನೆನಹಾಗಿ ನೆಲಸಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ರಸನೆಯೊಳು ರುಚಿಯಾಗಿ ಹೃದಯದೊಳು ಬೆಳಕಾಗಿ
ಸಕಲ ಕರಣಗಳೊಳಗೆ ನೆಲಸಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಉಸಿರುಸಿರಿನೊಳಗಿರುವೆ ಉಸಿರ ನೀತುಂಬಿರುವೆ
ಬಸವ ಬೆಳಕಿನೊಳೆನ್ನ ನಡೆಸಿರುವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

## ಸುವರ್ಣಯುಗ

ಆ ಹನ್ನೊಂದು ವರ್ಷಗಳು ನನ್ನ ಬದುಕಿನ ಸುವರ್ಣಯುಗ. ಪೂಜ್ಯ ನಮ್ಮ ಗುರುಗಳು 3-3-1930 ರಂದು ನನ್ನನ್ನು ತಮ್ಮ ಕಾರುಣ್ಯದ ಶಿಶುವನ್ನಾಗಿ ಎತ್ತಿಕೊಂಡರು. ಅಂದಿನಿಂದ 11-1-1941 ರವರೆಗೆ ಕಣ್ಣಲ್ಲಿ ಕಣ್ಣಿಟ್ಟು ನನ್ನನ್ನು ಕಾಪಾಡಿಕೊಂಡು ಬಂದರು. ಹಲವಾರು ಪರೀಕ್ಷೆಗಳನ್ನು ಒಡ್ಡಿದರು. ಅವೆಲ್ಲವನ್ನು ನಿರಾಳವಾಗಿ ಗೆಲ್ಲುವ ಚೈತನ್ಯವನ್ನೂ ತುಂಬಿದರು. ಒಬ್ಬ ಮಠಾಧಿಪತಿಗಿರಬೇಕಾದ ಸಮಸ್ತ ದೃಷ್ಟಿಯನ್ನು ನೀಡಿದರು, ತಿದ್ದಿದರು, ತೀಡಿದರು, ತೇದುನೋಡಿದರು, ಉಜ್ಜಿನೋಡಿದರು, ಸಮಯೋಚಿತ ಮಾತುಗಳಿಂದ ಎಚ್ಚರಿಸಿದರು, ಮಾರ್ಗ ತೋರಿದರು-ಆಚಾರ ವಿಚಾರದ ಮೂಸೆಯಲ್ಲಿ ಕಾಸಿದರು ಅಡಿಗಲ್ಲಮೇಲಿಟ್ಟು ಬಡಿದರು. ದಾಸೋಹದ ಮಹತ್ವದ ದರ್ಶನ ಮಾಡಿಸಿದರು. ಸೇವೆಯ ರಹಸ್ಯವನ್ನು ತೆರೆದು ತೋರಿಸಿದರು. 'ಏನ್ರೀ ಸ್ವಾಮಿಗಳೇ ನಿಮಗೆ ಸೇವೆಯ ಮಹತ್ವ ಗೊತ್ತಿಲ್ಲ. ಆಟವೀಸ್ವಾಮಿಗಳಿಗೆ ತಂಗಡಿ ಹೂವಿನ ಸಾರು ಕಂಡರೆ ಬಹಳ ಇಷ್ಟ. ನಾನು ಧನುರ್ಮಾಸ ಪೂರ್ಣ ಅವರ ಇಷ್ಟವನ್ನು ನೆರವೇರಿಸಿದೆ'. ಎಂದದ್ದು ಇನ್ನೂ ನೆನಪಿದೆ. 'ಹೋಗ್ತೀನಿ ಅನ್ನುವುದು ಬೇಡ, ಇರುತ್ತೇನೆ ಅನ್ನೋಣ' ಎನ್ನುತ್ತಿದ್ದರು. ಸ್ವಾಮಿಗಳೇ ನೀವು ಬಹಳ ಓದುತ್ತೀರಿ. ಸ್ವಲ್ಪ ಓದಬೇಕು, ಬಹಳ ತಿಳಿಯಬೇಕು ಇದು ಅವರ ಉಪದೇಶ. 'ಮನುಷ್ಯನಿಗೆ ವಾಂಛಲ್ಯಬೇಕು' ಎಂಬುದಾಗಿ ಆತ್ಮವಿಶ್ವಾಸ ತುಂಬುತ್ತಿದ್ದರು. 'ಕಾಮಿನಿ ಕಾಂಚನಗಳನ್ನು ಗೆಲ್ಲುವುದು ಸುಲಭವಲ್ಲ' ಎಂದು ಎಚ್ಚರಿಕೆಕೊಡುತ್ತಿದ್ದರು. ನನ್ನ ಚಾರಿತ್ರ್ಯ ಪಾವಿತ್ರ್ಯ ಸಂರಕ್ಷಣೆಗೆ ಗುರುಕೃಪೆಯೇ ಕಾರಣ. ಲಾಂಛನದ ಮಹತ್ವವನ್ನುಳಿಸಿಕೊಳ್ಳಲು ಅವರ ಆಶೀರ್ವಾದ ಶ್ರೀರಕ್ಷೆಯಾಯಿತು. ನಮ್ಮ ಗುರುಗಳು ಕೊಟ್ಟ ಬಹು ಅಮೂಲ್ಯವಾದ ಸಂದೇಶ "ನಾನು ಎಂದೂ ಯಾರನ್ನು ಕೇಳದಂತೆ ನಡೆಯಬೇಕೆಂದು, ಸ್ವಾಭಿಮಾನ ತುಂಬಿದ ದಾರಿಯಲ್ಲಿ ಸಾಗಬೇಕೆಂಬ ಅಪೇಕ್ಷೆ." ಕೈಹಿಡಿದು ನಡೆಸಿದರು, ಕಣ್ಣಿಟ್ಟು ಕಾಪಾಡಿದರು. "ಕರುಣಾಳು ಬಾ ಬೆಳಕೆ ಕೈಹಿದು ನಡೆಸೆನ್ನನು"-ಎಂಬುದೇ ಶ್ರೀಗುರುವಿನಲ್ಲಿ ನಾನು ಬೇಡಿದ್ದು, ಈಗಲೂ ಬೇಡುತ್ತಿರುವುದು. ಶ್ರೀಗುರು ತೋರಿಸಿದ ಹೃದಯದ ಸಂತಿಕೆಯೇ ನನ್ನೆಲ್ಲ ಶಕ್ತಿ ಸಾಮರ್ಥ್ಯ. ಆ ಹನ್ನೊಂದು ವರ್ಷಗಳು ಇನ್ನೊಂದು ಬಂದಾವೆಂದು ಸದಾ ಸ್ಮರಿಸುತ್ತ ಮನದ ಒಳಕೋಣೆಯೊಳು ವಿರಮಿಸುತ್ತೇನೆ.

(14-1-94 ರಂದು ಪರಮ ಪೂಜ್ಯ ಶಿವಯೋಗಿ ಶ್ರೀ ಉದ್ದಾನೇಶ್ವರರ 53ನೇ ಪುಣ್ಯಾರಾಧನೆಯಲ್ಲಿ ಮಾಡಿದ ಆಶೀರ್ವಚನದಿಂದ ಸಂಗ್ರಹ)

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ** ತತ್ಪರತೆ**ಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**" ಸಂಪಾದಕರು ",**
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

ಚಂದಾ ದರ
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಶ್ರೀ ಸಿದ್ಧಲಿಂಗೇಶ್ವರ ವಚನ



ಡಂಬಮಚ್ಚರ್ಯಕ್ಕೆ ಇಂಬುಗೊಡದಿರಬಲ್ಲಡೆ ಶರಣ
ಶಂಭು ಪದಪದ್ಮ ಭಕ್ತಿ ನಂಬುಗೆವಿಡಿದು ಅಗಲದಿರಬಲ್ಲಡೆ ಶರಣ
ಸೂಸಲೀಯದೆ ಮನವ ಈಶ ಪದದಲ್ಲಿ ಮೀಸಲಾಗಿರಿಸಿಕೊಂಡಿರಬಲ್ಲಡೆ
ಆ ಶರಣನ ಜಗದೀಶ್ವರನೆಂಬೆನು ಕಾಣಾ !
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ

ಯಾವನು ಶಿವನ ಪದದಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ಡಂಬ ಅಸೂಯೆ ಮುಂತಾದ ಪ್ರಾಕೃತ ಗುಣಗಳಿಗೆ ಎಷ್ಟೂ ಅವಕಾಶಕೊಡದೆ, ಮನವನ್ನು ವಿಷಯಗಳಲ್ಲಿ ಹರಿಗೊಡದೆ, ಕೇವಲ ಪರಮಾತ್ಮನ ಪಾದಗಳಲ್ಲಿ ಮೀಸಲಾಗಿರಿಸಿದವನೇ ಮಾಹೇಶ್ವರನೆನಿಸುವನು. ಇಷ್ಟೇಕೆ ಅವನೇ ಶಿವಸ್ವರೂಪಿಯಾಗುವನು.

# ಸಂಪಾದಕೀಯ

ಬೇಸಿಗೆಪ್ರಾರಂಭವಾಗಿದೆ. ಮಾರ್ಚ ಏಪ್ರಿಲ್ ತಿಂಗಳುಗಳು ಉರಿಬಿಸಿಲ ಬೇಸಿಗೆಯನ್ನುಣಿಸುತ್ತಿವೆ ಪ್ಶ್ಟೋ ಗ್ರಾಮಗಳಲ್ಲಿ ಕುಡಿಯುವ ನೀರಿಲ್ಲ. ಒಂದು ಕೊಡ ನೀರಿಗಾಗಿ ನಾಲ್ಕಾರು ಕಿ.ಮೀ ನಡೆದು ಹೋಗಬೇಕಾದ ಧಾರುಣ ಸ್ಥಿತಿ. ದನ ಕರುಗಳ ಪಾಡಂತೂ ಹೃದಯ ವಿದ್ರಾವಕ. ಗ್ರಾಮೀಣ ಬಂಧುಗಳಂತೂ ಬರೀ ಕಾಲಿನಲ್ಲಿ ಸುಡುವ ನೆಲದ ಮೇಲೆ ನಡೆದಾಡುವ ಕಷ್ಟ ಸಹಿಷ್ಣುಗಳು. ನಮ್ಮ ದೇಶಕ್ಕೆ ಬಂದಿರುವ ಸ್ವಾತಂತ್ರ್ಯವಂತೂ ಬರೀ ನಗರಗಳಿಗೆ, ಪಟ್ಟಣಗಳಿಗೆ ಮಾತ್ರ ಬಂದಿರುವಂತಿದೆ. ಸ್ವಾತಂತ್ರ್ಯದ ಫಲಾನುಭವಿಗಳು ಜನನಾಯಕರಾಗಿದ್ದಾರೆ, ಮೇಲ್ದರ್ಜೆಯ ಅಧಿಕಾರಿಗಳಾಗಿದ್ದಾರೆ. ಹಗಲು ಹೊತ್ತು ಕೊಳೆವೆ ದೀಪಗಳ ಬೆಳಕಿನಲ್ಲಿ ಹವಾ ನಿಯಂತ್ರಿತ ಕೋಣೆಗಳಲ್ಲಿ ಕುಳಿತು ಬೇಸಿಗೆಯ ಋತು ಮಾನವೇ ತಿಳಿಯದ ಪ್ರಾಜ್ಞರಾಗಿದ್ದಾರೆ. ಸೂರ್ಯನ ಬಿಸಿಲ ಬೇಸಗೆಯನ್ನು ನಮ್ಮ ಜನ ಸೃಷ್ಟಿಯಾದಿಯಿಂದಲೂ ಸಹಿಸಿಕೊಂಡು ಬಂದಿದ್ದಾರೆ, ಒಗ್ಗಿ ಬಾಳುತ್ತಿದ್ದಾರೆ. ಆದರೆ ಮಾನವ ಸೃಷ್ಟಿಸಿರುವ ಬೇಸಿಗೆಯಿಂದ ಪಾರಾಗಲಾರದೆ ನಿಟ್ಟುಸಿರು ಬಿಡುತ್ತಿದ್ದಾರೆ. ತತ್ತರಿಸುತ್ತಿದ್ದಾರೆ. ಭ್ರಷ್ಟಾಚಾರದ ಬೇಸಗೆಯಿಂದ ಬಸವಳಿದು ಹೋಗಿದ್ದಾರೆ. ಲಂಚ, ಶೋಷಣೆ, ಭ್ರಷ್ಟಾಚಾರವಿಲ್ಲದ ಸ್ಥಳವೇ ಇಲ್ಲವಂತಾಗಿದೆ. ಭ್ರಷ್ಟಾಚಾರವೇ ಜೀವನದ ಹೆದ್ದಾರಿಯಾಗಿದೆ. ನೀತಿ ನಿಯತ್ತುಗಳೆಲ್ಲ ಕಾಡು ದಾರಿ ಹಿಡಿದಿವೆ. ಶೋಷಣೆಯ ವಿರಾಟ ದರ್ಶನದ ನಗ್ನ ನೃತ್ಯ ನಡೆದಿದೆ. ಜನನಾಯಕರ ದ್ವಂದ್ವ ನೀತಿ ರಾಷ್ಟ್ರ ವೃಕ್ಷವನ್ನು ಒಳಗೊಳಗೇ ಹುಳು ಹತ್ತಿ ಕೊರೆಯುತ್ತಿವೆ. ಒಂದು ಕಾಲಕ್ಕೆ ಶಾಸಕರು, ಸಚಿವರು ಆಗುವುದೆಂದರೆ ಜನಸೇವೆಗೆ ಸಿದ್ಧರಾಗುವುದೆಂಬ ಭಾವನೆಯಿತ್ತು. ಇಂದು ಯಾವುದೇ ಸಾರ್ವಜನಿಕ ಜೀವನದ ಮುಖಂಡರೆನಿಸಿದವರು ನಡೆಸಿರುವ ‹‹ ದಂದೆ ›› ದಂಗು ಬಡಿಸುವಂತಿದೆ ‹‹ ಸೂಜಿಕೊಟ್ಟು ದಬ್ಬಳ ತೆಗೆಯುವ ›› ಸೇವೆ ನಡೆದಿದೆ. ಭ್ರಷ್ಟಾಚಾರಕ್ಕೆ ಸ್ತ್ರೀ-ಪುರುಷರೆಂಬ ಭೇದವಿಲ್ಲ, ದೊಡ್ಡವನು ಚಿಕ್ಕವನು ಎಂಬ ಭಾವನೆಯಿಲ್ಲ. ಉಚ್ಚ-ನೀಚವೆಂಬುದಿಲ್ಲ. ಹತ್ತು ರೂಪಾಯಿನಿಂದ ಲಕ್ಷರೂಗಳವರೆಗೆ ನಿಚ್ಚಣಿಕೆಯ ಪ್ರಮಾಣಕ್ಕನುಗುಣವಾಗಿ ವಿಷವೇರಿದಂತೆ ಭ್ರಷ್ಟಾಚಾರ ಬೆಳೆಯುತ್ತಿದೆ. ಸರ್ಕಾರದ ಸೇವೆಯಲ್ಲಿರುವ ಬಂಧುಗಳು ವೃತ್ತಿ ಜೀವನವನ್ನು ಕೇವಲ ಉಪಕಸಬನ್ನಾಗಿಸಿ ಕೊಳ್ಳುತ್ತಿದ್ದಾರೆ. ಜನ ಸಾಮಾನ್ಯರ ದುಃಖ ದುಮ್ಮಾನಗಳನ್ನು ಕೇಳುವ ಪ್ರವೃತ್ತಿಯೆ ಇಲ್ಲವಾಗಿದೆ. ಹೆರಿಗೆ ನೋವುಣ್ಣುತ್ತಿರುವ ಗರ್ಭಿಣಿಯ ನೆರವಿಗೆ ಬರಲೂ ವೈದ್ಯನ ಕೈಗೆ ಲಕ್ಷ್ಮಿ ಒಪ್ಪಿಸಬೇಕು. ನಿವೃತ್ತಿವೇತನ ಪಡೆಯಲೂ ಗುಮಾಸ್ತ ನಮರ್ಜಿಯನನ್ನುಸರಿಸಬೇಕು- ಕೆಲವು ಇಲಾಖೆಗಳಲ್ಲಂತೂ ‹‹ ಮಾಮೂಲು ›› ಸಂಚಿತ ಠೇವಣಿಯಾಗಿದೆ. ನಗರ ಜೀವನವಂತೂ ಮಧ್ಯಮ ವರ್ಗದವರ ಪಾಲಿಗೆ ನರಕವಾಗಿದೆ. ಶವದಹನ ಮಾಡಲು ತಕರಾರು ತೆಗೆಯುವ ‘ ಬೇಸಗೆ ’ ಸೃಷ್ಟಿ ಮಾಡಲಾಗಿದೆ. ತೊಟ್ಟಿಲಿನಿಂದ ಚಟ್ಟದವರೆಗೆ ಹಬ್ಬಿರುವ

ಭ್ರಷ್ಟಾಚಾರದ ಬೇಸಗೆಯಲ್ಲಿ ಜನ ಬೆಂದು ಹೋಗುತ್ತಿದ್ದಾರೆ. ದುಡ್ಡು ಮಾಡುವುದೊಂದೇ ಪುರುಷಾರ್ಥವೆಂದು ನಡೆದಿದ್ದಾರೆ. "ಸತ್ಯವಂತರಿಗಿದು ಕಾಲವಲ್ಲ" ಎಂಬ ದಾಸರ ವಾಣಿಯನ್ನು ಸತ್ಯ ಮಾಡುತ್ತಿದ್ದಾರೆ. ಸೂರ್ಯನ ಬಿಸಿಲ ಬೇಸಗೆಗೆ ಮೈಯೊಡ್ಡಿರುವ ಜನಕ್ಕೆ ಮಾನವ ದೃಷ್ಟಿ ಸಿಕ್ಕುವ ಭ್ರಷ್ಟಾಚಾರದ ಬೇಸಗೆಯಿಂದ ಪಾರಾಗಲಾರದೆ ಬಸವಳಿಯುತ್ತಿದ್ದಾರೆ. ತಾಳ್ಮೆ ತಪ್ಪುತ್ತಿದ್ದಾರೆ. ಮೊನ್ನೆ ನಡೆದ ಗ್ರಾಮಪಂಚಾಯಿತಿ ಚುನಾವಣೆಗಳನ್ನು ಕಂಡಮೇಲೆ ಜನಜೀವನ ದಳ್ಳುರಿಗೆ ಸಿಕ್ಕಿದ ಹುಲ್ಲುಮೆದೆಯಂತೆ ಹೊತ್ತಿ ಉರಿಯಲಾರಂಭಿಸಿದೆ. ಶಾಂತ ಜೀವನ ಕಣ್ಮರೆಯಾಗುತ್ತಿದೆ. ಜನನಾಯಕರ ಮಾತುಗಳು ಹಸೀ ಸುಳ್ಳಿನ ಮತಾಪುಗಳಾಗುತ್ತಿವೆ. ಬೆತ್ತಲಾಗದೆ ಬಯಲು ಸಿಕ್ಕದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಬೇಸಗೆ ಮುಗಿಯುತ್ತದೆ. ಆದರೆ ಭ್ರಷ್ಟಾಚಾರದ ಬೇಸಗೆ ಮುಗಿಯುವುದೆಂದು? ಹೀಗೆ ಮುಂದುವರಿದರೆ ಜನ ಬದುಕುವುದೆಂತು? "ಧರೆ ಹತ್ತಿ ಉರಿದಡೆ" ಎಲ್ಲಿ ಹೋಗುವುದು? ಜನ ಜಾಗೃತಿಯಾಗಬೇಕು. ಭ್ರಷ್ಟಾಚಾರಕ್ಕೆ ಪ್ರತಿಭಟಿಸಬೇಕು. ನಮ್ಮ ಜನನಾಯಕರ, ಅಧಿಕಾರಿಗಳ ವಿರುದ್ಧ ಸೆಟೆದು ನಿಲ್ಲಬೇಕು? ಹಾಗಾಗುವ ಕಾಲ ಬೇಗ ಬರುವಂತಾಗಲಿ.

## 'ಭಾವ' – ಬಿಂದಿಗೆ

—ಶಾರದ ಜಡೆ, ಹೈದರಾಬಾದ್

'ಭಾವ" ಬರುತಿಹನು ಈ ಸಲದ ಹಬ್ಬಕ್ಕೆ,
ಏನನ್ನೋ ತರುತಿಹನು ಕೊಡಲಿಕ್ಕೆ
ಭಾವ, ಬಿಂದಿಗೆಯಲ್ಲಿ,
ಏನು ತಂದಿಹನೆಂದು
ಬಲ್ಲವರದಾರು!
ಅದೇನಾದರೂ ಇರಲಿ,
ಬಂಧು ಮಿತ್ರರ ಬೆಸೆವ,
ಸುಧಾ ಬಿಂದುವಾಗಿರಲಿ ಸಾಕು;
ಭೇದ ಭಾವದ ಬೇಗೆಯಲ್ಲಿ,
ಬೇಯುತಿಹ ಈ ಜಗಕ್ಕೆ,
ಇಂದು, ಇನ್ನೇನು ಬೇಕು!
ಬಾಂಧವರೇ! ನೀವಿಂದು ಬನ್ನಿ,
ಸದ್ಭಾವ ಸೇಸೆಯನು ತನ್ನಿ,
'ಭಾವ' ನಿಗೆ ಸುಸ್ವಾಗತವಿದೆನ್ನಿ.

—ಬ. ಗಿ. ಯಲ್ಲಟ್ಟಿ, ಬಸವನಿಲಯ,
ಬನಹಟ್ಟಿ-587311 ವಿಜಾಪುರ-ಜಿಲ್ಲೆ.

ಸದ್ದುಗದ್ದಲವ ಪ್ರೀತಿಸುವ ಜನ
ಶಾಂತಿಯನೇನು ಬಯಸುವರು ?
ವಿಷಯ ವಿಕಾರದಲಿ ರಮಿಸುವ ಜನ
ನಿರ್ವಿಷಯವೇನು ಮೆಚ್ಚುವರು ?
ರಾಗ ದ್ವೇಷದಲಿ ಸಂತುಷ್ಟಪಡುವ ಜನ
ನಿರ್ವೈರ ಪ್ರೇಮವನೇನು ಇಷ್ಟಪಡುವರು ?
ಭ್ರಷ್ಟದಲಿ ತುಷ್ಟಿಪಡುವ ಜನ
ಜನಸೇವೆಗೇನು ತ್ಯಾಗಮಾಡುವರು ?
ಸ್ವಾರ್ಥಕ್ಕಾಗಿ ಗದ್ದಿಗೆ ಏರುವ ಜನ
ರಾಷ್ಟ್ರೋನ್ನತಿಗೇನು ಮನಸು ಮಾಡುವರು ?
ಪಿಶಾಚಿಯಾಗಿ ವರ್ತಿಸುವ ಜನ
ಮಾನವೀಯತೆಯನೇನು ಪ್ರೀತಿಸಿ ಪಾಲಿಸುವರು
ಅಧರ್ಮವನೆ ಉಸಿರಾಡಿಸುವ ಜನ
ಧರ್ಮವನೇನು ಆರಾಧಿಸುವರು ?
ಭವಿಯಾಗಿ ಬದುಕುವಲ್ಲಿ ಸುಖಿಸುವ ಜನ
ಭಕ್ತಿಯನೇನು ತನ್ಮಯರಾಗಿ ಪೂಜಿಸುವರು ?
ಕೊಡುಕೊಳುವ ಹದುಳವ ನಂಬಲಾರದ ಜನ
ಬಸವ ಗುರು ಶರಣ ಬಸವ ತಂದೆಯ
ದಾಸೋಹವನೇನು ನಂಬಿ ನಡೆದು ಧನ್ಯರಾಗುವರು ?

※ ※ ※ ※

ಅನ್ಯರು ಮಾಡುವ ಮುಖಸ್ತುತಿಯಲ್ಲಿ
ಅವನತಿಯಲ್ಲದೆ ಉನ್ನತಿಯಿಲ್ಲ.
ಅನ್ಯರು ಗೈವ ಅವಹೇಳನದಲ್ಲಿ
ಆತ್ಮವಿಮರ್ಶೆಗೆ ದಾರಿಯುಂಟಲ್ಲದೆ ಮುಖಭಂಗವಿಲ್ಲ.
ಮುಖಸ್ತುತಿಗೆ ಹಿಗ್ಗುವುದೂ ಒಂದು ಮಾಯೆ
ಅವಹೇಳನಕ್ಕೆ ಕುಗ್ಗುವುದೂ ಒಂದು ಮಾಯೆ !
ಉಭಯ ಮಾಯೆಯ ಮೀರಿನಿಂತಲ್ಲದೆ
ತಾನಾರೆಂಬುದನರಿಯಲಿಲ್ಲ !
ಈ ಅರಿವಿಲ್ಲದಲ್ಲಿ ಅರಿವಿನ ಅರಸ
ಬಸವ ಗುರು ಶರಣಬಸವ ತಂದೆಯನರಿಯಲಿಲ್ಲ !!

# ಕ್ಷೇತ್ರವಾರ್ತೆ

—ಹೆಚ್. ಬಿ. ಗಂಗಾಧರಯ್ಯ.

**ವಸ್ತುಪ್ರದರ್ಶನದ ಉದ್ಘಾಟನೆ:** ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆ ಅಂಗವಾಗಿ ಶ್ರೀ ಮಠದಲ್ಲಿ 31 ನೇ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ಫೆ. 28 ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಶ್ರೀಗಳು ಆಶೀರ್ವಚನ ನೀಡಿ ಜಾತ್ರೆ-ಉತ್ಸವಗಳಿಗೆ ಜನರಲ್ಲಿ ನಿರಾಸಕ್ತಿ ಉಂಟಾಗಿದೆ. ಸಾಮಾಜಿಕ ಜಾಗೃತಿ ಜ್ಞಾನ ತಿಳಿವಳಿಕೆಗೆ ಜಾತ್ರೆಗಳು ಉತ್ತಮ ಮಾಧ್ಯಮವಾಗಿದೆ ಎಂದು ಹೇಳಿದರು.

ನಮ್ಮ ರಾಷ್ಟ್ರ ನದಿ, ಅರಣ್ಯ, ಗಣಿ ಮತ್ತು ಕರಾವಳಿ ಸಂಪತ್ತುಗಳನ್ನು ವಿಪುಲವಾಗಿ ಹೊಂದಿ ಸಂಪದ್ಭರಿತವಾಗಿದೆ. ಆದರೆ ರಾಷ್ಟ್ರ ಬಡತನ ಮತ್ತು ದಾರಿದ್ರ್ಯದಿಂದ ಕೂಡಿದೆ. ಇದಕ್ಕೆ ಜನತೆ ಕ್ರಿಯಾಶೀಲವಾಗದಿರುವುದೇ ಮುಖ್ಯ ಕಾರಣ. ವೈಜ್ಞಾನಿಕ ಮನೋಭಾವನೆ ಮೂಡಿ ಪ್ರತ್ಯಕ್ಷವಾಗಿ ನೋಡಿ ತಿಳಿಯಲು ವಸ್ತು ಪ್ರದರ್ಶನ ನೆರವಾಗುತ್ತದೆ. ಈ ಬಗ್ಗೆ ತುಮಕೂರು ಜಿಲ್ಲಾ ಪಂಚಾಯತ್ ಪ್ರೋತ್ಸಾಹ ನೀಡುತ್ತಿರುವುದು ಶ್ಲಾಘನೀಯವಾಗಿದೆ. ರೈತ ಬಾಂಧವರು ಮತ್ತು ವಿವಿಧ ಉದ್ಯಮಿಗಳು ಇದರ ಲಾಭ ಪಡೆಯಬೇಕೆಂದು ಆಶಿಸಿದರು.

ಉದ್ಘಾಟನೆ ಮಾಡಿ ಮಾತನಾಡಿದ ರಾಜ್ಯದ ರೇಷ್ಮೆ ಸಚಿವರಾದ ಡಾ. ಜಿ. ಪರಮೇಶ್ವರ ಶ್ರೀ ಶ್ರೀಗಳು ಕೃಷಿಕ್ರಾಂತಿ, ಹಸಿರುಕ್ರಾಂತಿ ಸಮಾಜ ಪರಿವರ್ತಿಸಲು ದೂರದೃಷ್ಟಿಯಿಂದ ಬೋಧಪ್ರದವಾದ ವಸ್ತುಪ್ರದರ್ಶನವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವುದು ಹೆಮ್ಮೆಯ ಸಂಗತಿ ರೈತರ ಬದುಕು ಆರ್ಥಿಕ ಪ್ರಗತಿ ಪರ ಮಾರ್ಗದಲ್ಲಿ ಮುನ್ನಡೆಯಬೇಕು. ಕೃಷಿ ಆಧಾರಿತ ಕೈಗಾರಿಕೆಗಳನ್ನು ಆರಂಭಿಸುವಂತೆ ರೈತರಿಗೆ ಮನವಿ ಮಾಡಿದರು.

ತುಮಕೂರು ಶಾಸಕರಾದ ಶ್ರೀ ಎಸ್. ಷಫಿಅಹಮದ್ ಅಧ್ಯಕ್ಷತೆ ವಹಿಸಿ ಮಾತನಾಡುತ್ತ ರೈತ ವರ್ಗಕ್ಕೆ ಈ ವಸ್ತುಪ್ರದರ್ಶನದಿಂದ ಹೆಚ್ಚಿನ ತಿಳಿವಳಿಕೆ ಉಂಟಾಗಿದೆ. ಇದು ಅನೌಪಚಾರಿಕ ಶಿಕ್ಷಣ ಮಾಧ್ಯಮವಾಗಿ ಲಕ್ಷಾಂತರ ಮಂದಿಗೆ ರಾಜ್ಯ/ರಾಷ್ಟ್ರ ಪ್ರಗತಿಯ ಬಗ್ಗೆ ಮಾರ್ಗದರ್ಶನ ಮಾಡುತ್ತಿದೆ ಎಂದು ನುಡಿದರು.

ತುಮಕೂರು ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ರಾಕೇಶ್‌ಸಿಂಗ್ ಮುಖ್ಯ ಅತಿಥಿಗಳಾಗಿ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಪ್ರಾರಂಭಕ್ಕೆ ಶ್ರೀ ಹೆಚ್. ಬಿ. ಗಂಗಾಧರಯ್ಯ ಸ್ವಾಗತ ಕೋರಿದರು. ಶ್ರೀ. ಜಿ. ಕುಮಾರಸ್ವಾಮಿ ವರದಿ ಓದಿದರು. ಶ್ರೀ ಮಲ್ಲಿಕಾರ್ಜುನ್ ವಂದನೆ ಸಲ್ಲಿಸಿದರು.

**ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭ :**

ಫೆ 28 ಮಾರ್ಚಿ 15 ವರೆಗೆ ನಡೆದ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭ ಶ್ರೀ ಶ್ರೀ ಗಳವರ ಸಾನ್ನಿಧ್ಯದಲ್ಲಿ ನಡೆಯಿತು ಆರ್ಥಿಕ ಪ್ರಗತಿ-ಆರ್ಥಿಕ ಸಮಾನತೆ ರಾಷ್ಟ್ರ ಮುನ್ನಡೆಗೆ ಹೆಚ್ಚಿನ ಶಕ್ತಿ ಸಾಮರ್ಥ್ಯ ಕೊಡುತ್ತವೆ. ಸರ್ಕಾರ ಈ ದಿಸೆಯಲ್ಲಿ ಕೆಲಸ ಮಾಡುತ್ತಿದೆ. ಆದರೆ ನಿರೀಕ್ಷಿತ ಫಲ ದೊರೆತಿಲ್ಲ. ರಾಷ್ಟ್ರನಾಯಕರು ಬುದ್ಧಿಜೀವಿಗಳು ಅಧಿಕಾರಿಗಳು ಪ್ರಾಮಾಣಿಕವಾಗಿ ಈ ಬಗ್ಗೆ ಚಿಂತಿಸಬೇಕಾಗಿದೆ. ವ್ಯಕ್ತಿ-ಸಮಾಜ ಕ್ರಿಯಾಶೀಲವಾಗಬೇಕು. ಜಡತ್ವವನ್ನು ಕಿತ್ತೊಗೆಯಬೇಕು. ವಸ್ತುಪ್ರದರ್ಶನ ಕಾರ್ಯನಿರ್ವಹಣೆಯಲ್ಲಿ ಹಳೆಯ ವಿದ್ಯಾರ್ಥಿಗಳು ವಿಶೇಷವಾಗಿ ಸಹಕಾರ ನೀಡುತ್ತಿದ್ದಾರೆ ಎಂದು ಪ್ರಶಂಸೆ ವ್ಯಕ್ತಪಡಿಸಿದರು.

ಉತ್ತಮ ಮಳಿಗೆಗಳಿಗೆ ಬಹುಮಾನ ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಿ ಮಾತನಾಡಿದ ಬೃಹತ್ ಕೈಗಾರಿಕಾ ಖಾತೆ ಸಚಿವರಾದ ಶ್ರೀ ರಾಮಲಿಂಗಾರೆಡ್ಡಿ ವಿದ್ಯಾಕ್ಷೇತ್ರದಲ್ಲಿ ಪೂಜ್ಯ ಶ್ರೀ ಶ್ರೀಗಳು ಮಹಾಕ್ರಾಂತಿಯನ್ನು ಮಾಡಿದ್ದಾರೆ. ಮಹತ್ತರ ಸಾಧನೆ ಮಾಡಿದೆ ಶ್ರೀ ಮಠ. ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಿರುವ ನಮ್ಮ ಭಾರತದಲ್ಲಿ ವಸ್ತುಪ್ರದರ್ಶನಗಳು ಜನತೆಯ ಮೇಲೆ ಜ್ಞಾನಾರ್ಜನೆಗಾಗಿ ಒಳ್ಳೆಯ ಪರಿಣಾಮ ಆಗುತ್ತದೆ. ಶ್ರೀ ಮಠಗಳಲ್ಲಿ ಇಂಥ ಪ್ರದರ್ಶನ ಏರ್ಪಾಟು ಅಪರೂಪ. ಇದಕ್ಕೆ ಸರ್ಕಾರದ ಮೆಚ್ಚುಗೆ ಇದೆ ಎಂದು ಅಭಿಮಾನ ದಿಂದ ಹೇಳಿದರು.

ಮುಖ್ಯ ಅತಿಥಿಯಾಗಿ ವಿಧಾನ ಸಭಾಧ್ಯಕ್ಷರಾದ ಶ್ರೀ ಬಿ. ಎಸ್. ಕೌಜಲಗಿ ಅವರು ತುಮಕೂರು ಜಿಲ್ಲೆ ಜನರು ಪುಣ್ಯವಂತರು. ಸಿದ್ಧಗಂಗೆ ಜ್ಞಾನಗಂಗೆಯಾಗಿ ತಿಳಿವಳಿಕೆ ನೀಡುತ್ತಿರುವುದು ಸಾಹಸದ ಕಾರ್ಯ. ಇದು ಒಂದು ಸಾರ್ವಜನಿಕ ಕೆಲಸ. ಶ್ರೀ ಶ್ರೀಗಳು ಕಷ್ಟತರವಾದ ಅದ್ಭುತ ಕೆಲಸಗಳನ್ನು ಮಾಡುತ್ತಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಜನತೆ-ಸರ್ಕಾರ ಕೆಲಸ ಮಾಡಿದರೆ ರಾಜ್ಯಕ್ಕೆ ಕಲ್ಯಾಣ ವಾಗುತ್ತದೆ. ಯುವಕರಲ್ಲಿ ಸಂಶೋಧನಾ ಮನೋಭಾವ ಬೆಳೆಯಬೇಕು. ಎಲ್ಲ-ವನ್ನು ದೇಶ/ಸರ್ಕಾರದಿಂದ ಅಪೇಕ್ಷಿಸಬಾರದು. ಸ್ವಯಂ ಸಣ್ಣ ಕೈಗಾರಿಕೆಗಳನ್ನು ಪ್ರಾರಂಭಿಸುವ ಮನೋವೃತ್ತಿ ಬೆಳೆಸಿಕೊಳ್ಳಬೇಕೆಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶಾಸಕ ಶ್ರೀ ಎಸ್. ಷಫಿಅಹಮದ್ ವಹಿಸಿದ್ದರು. ಪ್ರಥಮ ಪಾರಿತೋಷಕ ಬಹುಮಾನಗಳು ಕೃಷಿ, ಅರಣ್ಯ ಇಲಾಖೆ ಮತ್ತು ತುಮಕೂರು ಎಚ್. ಎಂ. ಟಿ. ಮಳಿಗೆಗಳಿಗೆ ಲಭಿಸಿತು. ಹೆಚ್. ಬಿ. ಗಂಗಾಧರಯ್ಯ ಸ್ವಾಗತಿಸಿದರು. ಜಿ. ಕುಮಾರಸ್ವಾಮಿ ವಂದಿಸಿದರು. ಕೆ. ಎಚ್. ಶಿವರುದ್ರಯ್ಯ ಕಾರ್ಯಕ್ರಮ ನಿರೂಪಿಸಿದರು.

# ಈ ಶತಮಾನದ ದಾರಿದೀಪ

ವಿದ್ವಾನ್ ಎಸ್. ಷಡಕ್ಷರಿ ಎಂ.ಎ. ಉಪ ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು ಶ್ರೀ ಸಿದ್ಧಗಂಗಾ.

**ಮಹಾಶರಣ (ಲೋಕಹಿತವಾದಿ)**

ದೊಡ್ಡಹೊಟ್ಟೆ, ದೀರ್ಘದೇಹ, ಗಡ್ಡಮೀಸೆಗಳನ್ನು ಬಿಟ್ಟು ಕಾವಿ ತೊಟ್ಟವ-ರೆಲ್ಲರನ್ನೂ ಶರಣರೆಂದು ಕರೆಯಲಾಗುವುದಿಲ್ಲ, ರುದ್ರಾಕ್ಷಿ, ವಿಭೂತಿ, ಜಪಮಾಲೆ, ಧರಿಸಿಕೊಂಡು ಜಪ-ತಪ-ಹೋಮಾಸಕ್ತರನ್ನೂ ಶರಣರೆನ್ನಲಾಗದು; ಮತ್ತು ಶರಣರೆನ್ನುವವರ ವಚನಗಳನ್ನು ಕಂಠಪಾಠಮಾಡಿ ಕಂಠಪೂರ್ತಿಹಾಡಿ, ಹೊಗಳಿ ತಾನೂ ಹೊಗಳಿಸಿಕೊಂಡು ಸುತ್ತುವರಿದವರನ್ನೂ ಶರಣ-ಶರಣೆಯರೇ ಎಂದು ಸಂಬೋಧಿಸಿ ಹಾರ ತುರಾಯಿಗಳಿಂದ ಅಲಂಕರಿಸಿಕೊಳ್ಳುವ ಭಾವನಾಜೀವಿಗಳನ್ನು ತಾನೆ ಶರಣ-ರೆಂದು ಕರೆಯಲಾದೀತೆ ?

ತಮ್ಮ ಅರುಹಿನ ಎತ್ತರದಿಂದ, ಅನುಭವದ ಬಿತ್ತರದಿಂದ ಸತ್ಯ, ಜ್ಞಾನ, ಚೈತನ್ಯ ಜಂಗಮ ಲಿಂಗವಾಗಿ.

"ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ
ಪ್ರಾಣದಲ್ಲಿ ನಿರ್ಭಯ ಚಿತ್ತದಲ್ಲಿ ನಿರಪೇಕ್ಷೆ
ವಿಷಯದಲ್ಲಿ ಉದಾಸೀನ ಭಾವದಲ್ಲಿ ದಿಗಂಬರ
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿಭೋ"

ಎಂಬ ಶರಣ ಆದಯ್ಯನವರ ವಚನಕ್ಕೆ ಬದ್ಧರಾಗಿ ಶಿವಚೈತನ್ಯದಲ್ಲಿ ಅಖಂಡವಾದ ನಂಬಿಗೆ ಇರಿಸಿ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಮಹಾಶರಣ ! ಅಂತೆಯೇ ಶರಣರಿಗೊಪ್ಪುವಂತೆ ಅರುಹಿನಿಂದ ಒಪ್ಪಿತವಾಗಿರುವ, ನಿಜವನರಿದ ನಿಶ್ಚಿಂತರು, ಮರಣವಗೆಲಿದ ಮಹಾಂತರು, ಪರವನೊಳಗೊಂಡ ಪರಿಣಾಮಿ, ನಿರಾಳವನೊಳಗೊಂಡ ಸಹಜ ಶೀಲರು, ಸಹಜ ಶಿವಯೋಗಿಗಳು, ಇಪ್ಪತ್ತೊಂದನೆಯ ಶತಮಾನಕ್ಕೆ ಭಾಗ್ಯ ಪುರುಷರು ಆದ ಮಹಾಶರಣರು ಶ್ರೀ ಸಿದ್ಧಗಂಗೆಯ ಮಠಾಧಿಪತಿಗಳು. ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವಪರಿವರ್ತನೆಗಳು ಬಸವಾದಿ ಶರಣರ ಪರಮಗುರಿ. ಎಲ್ಲ ಕಾಲಕ್ಕಿಂತಲೂ ಇಂದಿನ ಕಾಲದಲ್ಲಿ ಶರಣರ ವಚನಗಳ ಅಗತ್ಯತೆ ಹೆಚ್ಚಾಗಿದೆ. ಇಂತಹ ಅಗತ್ಯತೆಯನ್ನೂ ಪೂರೈಸಬಲ್ಲ, ಸತ್ಯ, ಜ್ಞಾನ, ಚೈತನ್ಯ, ಜಂಗಮರೂಪಿ ಮಹಾಶರಣ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

**ತ್ರಿವಿಧ ದಾಸೋಹಿ :-**

ಇಂದಿನ ವಾಮಾಚಾರಗಳಿಗೆ ನಮ್ಮ ಮಕ್ಕಳು ಬಲಿಯಾಗಬಾರದೆಂದು ಪೂಜ್ಯ ಶಿವಕುಮಾರ ಸ್ವಾಮಿಗಳು ಪ್ರಸಾದ ನಿಲಯದ ಮಹಾನ್ ಆಶ್ರಯ ನೀಡಿ, ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನದಾಸೋಹ, ಜ್ಞಾನ ದಾಸೋಹ, ಅರುಹಿನ ದಾಸೋಹ ನೀಡಿದ್ದಾರೆ. ಸಿದ್ಧಗಂಗೆಯ ಪ್ರಸಾದದಲ್ಲಿ ಬಸವಾದಿ ಶರಣರು ವಾಸಮಾಡಿದ್ದಾರೆ. ಶರಣರು ಸಾರಿದ ಪ್ರಸಾದ ಸಿದ್ಧಾಂತಕ್ಕೆ ಇಂದು ಅತಿದೊಡ್ಡ ಪೆಟ್ಟುಬಿದ್ದಿದೆ. ಸಿಕ್ಕಲ್ಲಿ ತಿಂದು, ಸಿಕ್ಕಲ್ಲಿ ಉಂಡು, ಸಿಕ್ಕಿದ್ದನ್ನು ಸೇವಿಸುವ ಅಂತರ ಪಿಶಾಚಿಗಳು ಇಂದು ನಾಡ ತುಂಬ ತಿರುಗಾಡುತ್ತಲಿದ್ದಾರೆ. ಪ್ರಸಾದವೇ ಪವಿತ್ರ ಜೀವನದ ಭದ್ರಅಡಿಗಲ್ಲು ಎಂದು ಶರಣರು ಅಖಂಡವಾಗಿ ನಂಬಿದ್ದಾರೆ. ಪ್ರಾಸಾದಿಕರು ಎಂದರೆ ಪವಿತ್ರ ಜೀವನಕ್ಕೆ ಪೂರಕವಾದ ಪವಿತ್ರ ಪ್ರಸಾದವನ್ನು ಶಿವಸ್ಮರಣೆಯಲ್ಲಿ ಸ್ವೀಕರಿಸಿದವರು ಎಂದರ್ಥ. ಕಾಯಕವಿಲ್ಲದೆ ಪ್ರಸಾದವಿಲ್ಲ. ಪ್ರಸಾದವಿಲ್ಲದೆ ಅಂಗಾಂಗ ಸಾಮರಸ್ಯವಿಲ್ಲ. ಕಾಯಕ, ಪ್ರಸಾದ, ಅಂಗಾಂಗ ಸಾಮರಸ್ಯಗಳಗುಟ್ಟು ಬಲ್ಲವನೇ ತ್ರಿವಿಧ ದಾಸೋಹಿ. ಈತನೇ ವೀರದಾಸೋಹಿ. ಈತನೇ ಮಹಾದಾಸೋಹಿ. ಈ ನಿಟ್ಟಿನಲ್ಲಿ ನಮ್ಮೆದುರಿನಲ್ಲಿ ತೊಳಗಿ ಬೆಳಗುತ್ತಿರುವ ಪೂಜ್ಯ ಶ್ರೀ ಶಿವಕುಮಾರಮಹಾಸ್ವಾಮಿಗಳವರು ವೀರದಾಸೋಹಿಗಳು, ಮಹಾದಾಸೋಹಿಗಳು, ಇವರಿಂದ ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವಪರಿವರ್ತನೆ ಸಮಗ್ರ ಕಲ್ಯಾಣಸಾಧ್ಯ.

**ದಾರಿದೀಪ :–** ಇಂದು ಅನುಭಾವದ ಆತ್ಮ ವಿದ್ಯೆ ದೂರ ಸರಿಯುತ್ತ ನಡೆದಿದೆ. ಲೌಕಿಕ ಆಡಂಬರಗಳು ಅತಿಯಾಗುತ್ತಿವೆ. ಒಳಗು ಬೆಳಗುವ ಬದಲು ಹೊರಗು ಬೆಳಗುವವರೇ ತುಂಬಿದ್ದಾರೆ. ಅರುಹಿನಿಂದ ಹಿರಿಯರಾಗುವುದನ್ನು ಮರೆತು, ಒಣ ಆಡಂಬರದ ಹಿರಿಯರಾಗಲು ಬಹುಜನರು ಹೊರಟಿದ್ದಾರೆ. "ಆನೆಯ ನೇರಿಕೊಂಡು ಹೋದಿರೆ ನೀವು; ಕುದುರೆಯ ನೇರಿಕೊಂಡು ಹೋದಿರೆ ನೀವು" ಇತ್ಯಾದಿ ವಚನದಲ್ಲಿ ಬಸವಣ್ಣನವರು ಹೇಳುವಂತೆ ಇಂಥ ಬಯಲಾಡಂಬಕರಿಗೆ "ಇಂದು ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳವರ ಬದುಕು ಒಂದು ಮಹಾನ್ ದಾರಿ ದೀಪವಾಗಿದೆ" ಸದಾಕಾಯಕ, ಸದಾಸರಳ ಜೀವನ, ಸದಾ ಅವ್ಯಕ್ತ ಸೇವೆ, ನಿರಂತರ ದಾಸೋಹಗಳಿಂದ ಪೂಜ್ಯ ಮಹಾಸ್ವಾಮಿಗಳವರು ಕಣ್ಣೆದುರಿನ ಕೈಲಾಸವಾಗಿದ್ದಾರೆ.

**ನಿಜಾನುಭವಿ:–** ನಿರಂತರ ದುಡಿಮೆಯ ಫಲವಾಗಿ ಇಂದು ಸಿದ್ಧಗಂಗೆ ಪ್ರಪಂಚ ದಲ್ಲಿಯೇ ಅತ್ಯುನ್ನತ ಆಧ್ಯಾತ್ಮ ಶಿಕ್ಷಣ ಶಾಲೆಯಾಗಿ ತಲೆಯೆತ್ತಿ ನಿಂತಿದೆ. ಶ್ರೀಮಠದ ದಾಸೋಹದ ಪವಿತ್ರ ಪ್ರಸಾದ ಸ್ವೀಕರಿಸಿ. ಸಕಲ ಜಾತಿ-ಮತಗಳ ವಿದ್ಯಾರ್ಥಿಗಳು ಇಂದು ಜಗತ್ತಿನಾದ್ಯಂತ ಪ್ರಸಾದ ಸಾಕ್ಷಿಯಾಗಿ ಬೆಳಗುತ್ತಿದ್ದಾರೆ. ಪೂಜ್ಯರು ಆರಂಭಿಸಿದ ಶಿಕ್ಷಣ ಸೌಧಗಳು ಇಂದು ಪೂಜ್ಯರ ಚಿಂತನ ಚೈತ್ಯಾಲಯಕ್ಕೆ ಪ್ರಯೋಗ ಧಾಮವಾಗಿವೆ. ಇಂಥ ಘನ ಮಹಿಮರು ಇರುವುದರಿಂದಲೇ ನಾಡು ಸರ್ವಾಂಗ

ಸುಂದರವಾಗ ಬಲ್ಲದು. ಪೂಜ್ಯರು ಧರಿಸಿದ ತ್ಯಾಗದ ಕುರುಹಾದ ಕಾವಿಯು ನಾಡಿನ ಮಠಾಧಿಪತಿಗಳಿಗೆಲ್ಲ ಒಂದು ಒಳ್ಳೆಯ ಮೌಲ್ಯವನ್ನು ಬೆಲೆಯನ್ನು ತಂದಿದೆ. ಇಂದು ದೇಶ ಏನಾದರೂ ಸಮಸ್ಯೆಗಳನ್ನು ಎದುರಿಸುತ್ತಲಿದ್ದರೆ ಅದಕ್ಕೆ ಮುಖ್ಯ ಕಾರಣ " ಇಂಥ ನಿಜಾನುಭಾವಿ ಗಳನ್ನು ಮರೆತುದೆ ಮುಖ್ಯ ಕಾರಣವಾಗಿದೆ.

**ಸಮಸ್ಯೆ ವಿರುದ್ಧ ಸಮರ:-** ಇಂದಿನ ಶತಮಾನದ ಜ್ವಲಂತ ಸಮಸ್ಯೆಗಳಾದ ಭಾಷಾ ಭೇದ, ಜಾತಿ ಭೇದ, ಧರ್ಮಭೇಧ, ಜನಾಂಗಭೇದ ಮತ್ತು ವರ್ಣಭೇದ ಗಳಿಂದ ಜಗತ್ತು ತತ್ತರಿಸಿ ಹೋಗುತ್ತಿದೆ. ಪಂಜಾಬ್, ಕಾಶ್ಮಿರ, ಅಸ್ಸಾಂ, ಶ್ರೀಲಂಕಾ ಡಾರ್ಜಿಲಿಂಗ್‌ಗಳಲ್ಲಿ ಪ್ರತಿನಿತ್ಯ ಮುಗ್ಧ ಮಾನವರ ರಕ್ತದ ಕೋಡಿ ಹರಿದು ಹೋಗು-ತ್ತಿದೆ. ಜಾಗತಿಕ ವರ್ಣಭೇದ, ಜನಾಂಗ ಭೇದ, ನೀತಿಗೆ ದಕ್ಷಿಣ ಆಫ್ರಿಕ, ಜರ್ಮನಿ ಗಳು ಬಲಿಪಶುವಾಗಿವೆ. ಇಂದು ಪರಮ ಪಾವನ ಮೂರ್ತಿಗಳಾದ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳಂತಹ ಪಾವನ ತಪೋಮೂರ್ತಿಗಳು, ಶಿವಯೋಗ ರಕ್ಷೆಯಲ್ಲಿ ದಕ್ಷಿಣ ಭಾರತ ಶಾಂತ ಶೀತಲವಾಗಿದೆ. ನಮ್ಮಲ್ಲಿಯ ಒಳಾಂಗಣದ ಸಮಸ್ಯೆಗಳಾದ ಜಾತಿಯೊಳಗಿನ ಜಾತಿಗಳು, ಮಡಿವೈಲಿಗೆಗಳು, ಶರಣರನ್ನು ವಿಶ್ವ ಗುರು ಬಸವಣ್ಣನವರನ್ನು ಎಡದ ಕಣ್ಣಿಂದ ಕಾಣುವ ಜಾತಿ ಭ್ರಮೆಗಳು, ಅಡ್ಡ ಪಲ್ಲಕ್ಕಿಗಳು, ಮದುವೆಗಳಲ್ಲಿ ದುಂದುವೆಚ್ಚ, ವರದಕ್ಷಿಣೆಯ ಶೋಷಣೆ, ಉಚ್ಚ-ನೀಚ ಭಾವ ದೇವದಾಸಿ ಪದ್ಧತಿ; ಕುಡಿತ, ಜೂಜು, ಮುಂತಾದ ಚಟಗಳು ಇವುಗಳ ವಿರುದ್ಧವಾಗಿ ಪರಮ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಾಟಕದ ಮಾಧ್ಯಮದಿಂದಲೂ ಪ್ರಾಯೋಗಿಕವಾಗಿ ಹಲವು ದಶಕಗಳಿಂದ ಸಮರವನ್ನೇ ಸಾರಿದ್ದಾರೆ.

**ಶರಣರ ಸಾಧನೆ:-** "ಬಸವ ಎಂದೊಡೆ ಅಸಾಧ್ಯ ಸಾಧ್ಯವಪ್ಪುದು, ಅಭೇದ್ಯ ವಪ್ಪುದು" ಎಂದು ಶರಣರು ಸಾರಿದ ಅನುಭಾವದ ನುಡಿಯನ್ನು ಪೂಜ್ಯ ಶ್ರೀಗಳವರು ನಡೆಗೆ ತಂದು ಅತ್ಯಂತ ಧೈರ್ಯವಾಗಿ ಮುನ್ನಡೆದವರು, ಬದುಕಿನಲ್ಲಿ ಅದೆಂಥ ದುಗುಡ-ದುಮ್ಮಾನಗಳು ಬಂದೆರಗಿದರೂ ಬಸವ ನಿಷ್ಠೆಯನ್ನು ಮೈಗೂಡಿಸಿಕೊಂಡು ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕೆಚ್ಚೆದೆಯಿಂದ ಮುನ್ನುಗ್ಗಿದವರು. ಬಂದೊದಗುವ ಆಪತ್ತು-ವಿಪತ್ತುಗಳನ್ನು ಸದಾ ಹಸನ್ಮುಖಿಯಾಗಿ ಬಸವ ಸ್ಮರಣೆಯಲ್ಲಿ ಪ್ರಸಾದ-ಹಸಾದವೆಂದು ತಮ್ಮ ಆತ್ಮಬಲದ ತೇಜದಿಂದ ಬೆಳಗಿದವರು. ಬಸವಾದಿ ಶರಣರ ಅನುಭಾದ ಆಶ್ರಯದಲ್ಲಿ ಪ್ರತಿಯೊಬ್ಬರು ಬದುಕುವದನ್ನು ಪ್ರಸ್ತುತ ಜೀವನದಲ್ಲಿ ಕಲಿಯಬೇಕು. ಸಂತೃಪ್ತಿಯ ಶರಣ ಜೀವನವನ್ನು ಸಾಗಿಸಬೇಕು. ಇಂದು ಮಾನವನ ಜೀವನ ಹಸನಾಗಬೇಕಾದರೆ ಇಂಥ ಮಹಾಶರಣ ಸಾಧಕರ ಸಾಧನೆ ಸಂದೇಶಗಳಿಗೆ ಶರಣು ಹೋಗಬೇಕು.

# ವರ್ಧಮಾನ ಮಹಾವೀರ

ಮಹಾಂತೇಶ ಮಲ್ಲನಗೌಡ ಕೊಪ್ಪಳ, 583231.

ಜಗತ್ತಿನ ಧಾರ್ಮಿಕ ಪರಂಪರೆಗೆ ಭಾರತದ ಇನ್ನೊಂದು ಕೊಡುಗೆಯಾದ ಜೈನ ಧರ್ಮವು ಪ್ರಮುಖಧರ್ಮಗಳಲ್ಲಿ ಒಂದು. "ಜಿಯೋ ಜೌರ್ ಜನೇದೊ" ಎಂದು ಹೇಳಿ ಮಾನವ ಪ್ರೀತಿ. ಸಹಬಾಳ್ವೆ, ವಿಶ್ವಭ್ರಾತೃತ್ವಸಾರುವ ಜೈನಧರ್ಮ ತನ್ನದೇ ಆದ ಸ್ಥಾನವನ್ನು ಜನರಲ್ಲಿ ಪಡೆದಿದೆ. ಈ ಧರ್ಮದ ಸಂಸ್ಥಾಪಕ ಮಹಾವೀರ.

ಮಹಾವೀರನೆಂದು ನಂತರ ಕರೆಯಲ್ಪಟ್ಟ ವರ್ಧಮಾನ ಹುಟ್ಟಿದ್ದು ಒಂದುಕ್ಷತ್ರಿಯ ಗಣದ ಮುಖ್ಯಸ್ಥಾನದ ಸಿದ್ಧಾರ್ಥ ಹಾಗೂ ಗಣರಾಜನಾದ ಮಗಳಾದ ತ್ರಿಶಲಳ ಎರಡನೇ ಮಗನಾಗಿ ಆತನು ಹುಟ್ಟಿದ ಸ್ಥಳ ಈಗಿನ ಬಿಹಾರ ರಾಜ್ಯದಲ್ಲಿ ಬರುವ ಮಗ ಎಂಬಲ್ಲಿ ( 599 ಕ್ರಿ.ಪೂ. ) ದಂತ ಕತೆಗಳ ಪ್ರಕಾರ ತ್ರಿಶಲಳಿಗೆ ಹದಿನಾಲ್ಕು ಆಶ್ಚರ್ಯ ಕರ ಕನಸುಗಳು ಬಿದ್ದವೆಂದು. ಆಕೆ ಮಗುವಿಗೆ ಜನ್ಮ ಕೊಡುವುದಲ್ಲದೇ ಆ ಮಗು ಶಾಶ್ವತವಾದ ಶಾಂತಿಯನ್ನು ಹಾಗೂ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆಂದ ಮುನ್ಸೂಚನೆ ನೀಡಿದವು. ತ್ರಿಶಲಳ ಆ ಕನಸುಗಳು ಈಗಿನ ಜೈನಮಂದಿರಗಳಲ್ಲಿ ಕೆತ್ತಲ್ಪ ಟ್ಟಿರುತ್ತವೆ. ದಂತಕಥೆಗಳು ಆತನು ಚಿಕ್ಕವನಿದ್ದಾಗ ಧೈರ್ಯ ಸಾಹಸಗಳಲ್ಲಿ ತನ್ನ ಸಹ-ಚರರನ್ನು ಮೀರಿಸಿದ್ದನೆಂಬುದನ್ನು ತೋರಿಸುತ್ತದೆ.

ಆತನ ತಂದೆತಾಯಿಗಳ ಅಂತ್ಯದವರೆಗೆ ಅವರೊಡನೆಯಿದ್ದು ಮೂವತ್ತು ವರ್ಷ ತಲುಪಿದಾಗ "ಯೋಗಿ" ಯಾಗಲಿಕ್ಕೆ ಸಿದ್ಧತೆಮಾಡಿಕೊಂಡ. ತನ್ನ ಹಿರಿಯಣ್ಣನ ಅನುಮತಿ ಪಡೆದುಕೊಂಡು ಈ ಜಗತ್ತನ್ನು ತ್ಯಾಗಮಾಡಲು ಮನಸ್ಸು ಮಾಡಿದ.

ಜೈನಧರ್ಮದ ಶ್ವೇತಾಂಬರ ಪರಂಪರೆಯಲ್ಲಿ ಮಹಾವೀರ ಯಶೋದ ಎಂಬಾಕೆ-ಯನ್ನು ಮದುವೆಯಾಗಿ ಪ್ರಿಯದರ್ಶನ ಎಂಬ ಮಗಳು ಹುಟ್ಟಿದಳು ಎಂದು ತಿಳಿಸಿದರೆ ದಿಗಂಬರರು ಆತನು ಮದುವೆ ಆಗಲಿಲ್ಲ ಎಂದು ತಿಳಿಸುತ್ತದೆ. ಎಲ್ಲಾ ಪಂಗಡಗಳು ಆತನು ಮೂವತ್ತು ವರ್ಷದವನಿದ್ದಾಗ (570-569 ಕ್ರಿ.ಪೂ ಮಧ್ಯದಲ್ಲಿ) ಆಧ್ಯಾತ್ಮ ಜೀವನದೆಡೆಗೆ ಹೆಚ್ಚು ಗಮನಕೊಟ್ಟನೆಂದು ಹೇಳುತ್ತದೆ.

ಮಹಾವೀರನು "ಮತಿಜ್ಞಾನ,, "ಶೃತಿಜ್ಞಾನ" ಮತ್ತು "ಅವಧಿಜ್ಞಾನ" ಪಡೆದು ಹುಟ್ಟಿದನೆಂದು ನಂಬಲಾಗಿದೆ. ಅತನು ಪರಿಶ್ರಮದಿಂದ "ಮನ ಪರ್ಯಾಯ ಜ್ಞಾನ" ವನ್ನು ಪಡೆದ. ಹನ್ನೆರಡು ವರ್ಷಗಳು ನಿರಂತರ ಅಲೆದಾಡಿ ಹಾಗೂ ಕಠಿಣಕ್ರಮದಿಂದ ಆತನು ಐದನೇ ಜ್ಞಾನವಾದ ಕೇವಲಜ್ಞಾನವನ್ನು ಪಡೆದ "ಜಿನ,,(Or Conquerer of eight karmas) ಎಂದು ಹೆಸರುಪಡೆದ. ಇದರಿಂದ ಜೈನ ಎಂದು ಜೈನ ಧರ್ಮ ಹೆಸರು ಪಡೆದಿದೆ. ‹ಜೀನ, ಎಂದರೆ ಇಂದ್ರಿಯಗಳನ್ನು ಗೆದ್ದವನೆಂದು ಅರ್ಥ ಜೀನ ಧರ್ಮವನ್ನು ಸ್ಥಾಪಿಸಿ ಆ ಧರ್ಮವನ್ನು ಉನ್ನತಸ್ಥಿತಿಗೆ ಏರಿಸಿದರು. 24 ಮಂದಿ ತೀರ್ಥಂಕರರು ವರ್ಧಮಾನ ಮಹಾವೀರನು 24ನೆಯವನು.

ಮಹಾವೀರನು ದಿವ್ಯಜ್ಞಾನವನ್ನು ಪಡೆದುಕೊಂಡು ತನ್ನ ಬೋಧನೆಯನ್ನು ಪ್ರಾರಂಭಿಸಿದ. ವೈಶಾಲಿಯ ಉಪನಗರವಾದ ಕುಂಡ ಗ್ರಾಮದ ಬಳಿಇದ್ದ ಸುಂದರ-ವನದಲ್ಲಿ ಎಲ್ಲ ಋತುಗಳಲ್ಲಿ ಹಸಿರಾಗಿರುವ ಅಶೋಕ (ಶೋಕವಿಲ್ಲದ) ವೃಕ್ಷದ ಕೆಳಗೆ ಕುಳಿತು ತಪಸ್ಸನ್ನು ಆಚರಿಸಿದ. ಬೌದ್ಧರಿಗೆ ಅರಳಿಮರ ಪೂಜ್ಯವಾದಂತೆ ಜೈನರಿಗೆ ಅಶೋಕ ವೃಕ್ಷ ಪೂಜ್ಯವಾದದ್ದು.

ಮಹಾವೀರನು ಕೇವಲ ಜ್ಞಾನಪಡೆದಮೇಲೆ ಮೊಟ್ಟಮೊದಲಿಗೆ ತನ್ನತತ್ವವನ್ನು ಉಪದೇಶಿಸಿದ್ದು ಆತನ ಮೊದಲ ಶಿಷ್ಯನಾದ ಗೌತಮ ಇಂದ್ರಭೂತಿಗೆ. ಮತ ಪ್ರಚಾ-ರಕನಾಗಿ ದೇಶ ದೇಶವನ್ನುಸುತ್ತಿದನು. ಅವನ ಮತಕ್ಕೆ ವಿದೇಹದ ದೊರೆ ಚೇತಕ, ಅಂಗದೇಶದ ದೊರೆ ಕಣಿಶ, ಕೌಶಾಂಬಿಯ ದೊರೆ ಸಾತಾನಕ ಮುಂತಾದ ರಾಜರುಗಳ ಮನ್ನಣೆ ದೊರೆಯಿತು. ಅವನು ಬೋಧಿಸುತ್ತಿದ್ದುದು ಅನಿಕ್ಷರಿ ಭಾಷೆಯಲ್ಲಿ ಗೌತಮನು ಅದನ್ನು ಮಾಗಧಿಗೆ ಭಾಷಾಂತರಿಸಿ ಜನರಿಗೆ ತಿಳಿಸುತ್ತಿದ್ದ.

ಮಹಾವೀರನು ಕಾಲವಾದಮೇಲೆ ಅವನ ಇಬ್ಬರು ಶಿಷ್ಯರಾದ ಸುಧರ್ಮ ಮತ್ತು ಜಂಬೂ ಮಹಾವೀರನ ವಚನಗಳನ್ನು ಬರೆದಿದ್ದ. ಇವು ಮುಂದಿನ ಕಾಲದಲ್ಲಿ ಜೈನಾಗಮ ಗ್ರಂಥಗಳಾದವು.

ಮಹಾವೀರನು 72ನೇ ವರ್ಷದವನಿದ್ದಾಗ ಪಾಟ್ನಾಜಿಲ್ಲೆಯ ಸಣ್ಣ ಹಳ್ಳಿಯಾದ ಪಾಪ ಎನ್ನುವಲ್ಲಿ ( ಈಗಿನ ಪಾವಪುರಿ ) ತೀರಿಕೊಂಡ. ( 527 ಕ್ರಿ.ಪೂ.)
ಜೈನರ ಪ್ರಕಾರ ನಿಜವಾದ ತತ್ವಜ್ಞಾನದ ತಳಹದಿ ಒಂಭತ್ತು ತತ್ವಗಳ ಮೇಲಿದೆ ಅವು ಇಂತಿವೆ.

1] ಆತ್ಮ 2] ಆತ್ಮವಿಲ್ಲದ್ದು, [Non Soul] 3] ಪುಣ್ಯ, 4] ಪಾಪ, 5] ಪಾಪ–ಪುಣ್ಯಗಳಿಗೆ ಕಾರಣ 6] ಬಾಹ್ಯ ಆಕ್ರಮಣದಿಂದ ಯಾವುದು ತಡೆಯುವುದು 7] ಕೃತಿ-ಯೊಡನೆ ಆತ್ಮದ ಬಂಧನ 8] ಕೃತಿಯನಾಶ 9] ಎಲ್ಲ ಕೃತಿಗಳಲ್ಲಿ ಆತ್ಮದ ಸ್ವಾತಂತ್ರ್ಯ.

ಜೈನಧರ್ಮದಲ್ಲಿ ಬರುವ ತ್ರಿರತ್ನಗಳು [ Three jewels ] ಯಾವುದೆಂದರೆ-ಸರಿಯಾದ ನಂಬಿಕೆ, ಸರಿಯಾದ ಜ್ಞಾನ, ಸರಿಯಾದ ಚಾರಿತ್ರ್ಯ. ಜೈನಧರ್ಮದಲ್ಲಿ ಬರುವ ಈ ಕೆಳಗಿನ ನವಕಾರಮಂತ್ರ ಗಮನಾರ್ಹವಾದದ್ದು.

ಓಂ ಣಮೋ ಅರಹಂತಾಣಂ ।
ಓಂ ಣಮೋ ಸಿದ್ಧಾಣಂ ।
ಓಂ ಣಮೋ ಆಯರಿಯಾಣಂ ।
ಓಂ ಣಮೋ ಉದಝ್ಝಾಯಾಣಂ ।
ಓಂ ಣಮೋ ಲೋಯೆ ಸದ್ವಸಾಹೂಣಂ ॥

ಏಸೋ ಪಂಚ ನಮುಸ್ಕಾರೋ । ಸರ್ವ ಪಾವಪ್ಪಣಾಶಣೋ ॥
ಮಂಗಲಾಣಂಚ ಸರ್ವ್ವೇಸಿಂ ಫಡಮಂಹೋ ಇಮುಂಗಲಂ ॥
ಪ್ರಾಕೃತಿಯಲ್ಲಿರುವ ಈ ಮಂತ್ರದ ಅರ್ಥವೇನೆಂದರೆ

—ಎಲ್ಲಾ ತೀರ್ಥಂಕರರಿಗೆ ನಮಸ್ಕಾರ
—ಸಿದ್ಧಪುರುಷರಿಗೆ ನಮಸ್ಕಾರ
—ಆಚಾರ್ಯರಿಗೆ ನಮಸ್ಕಾರ
—ಉಪಾಧ್ಯಾಯರಿಗೆ ನಮಸ್ಕಾರ
—ಲೋಕದ ಎಲ್ಲ ಸಾಧುಗಳಿಗೆ ನಮಸ್ಕಾರ

ಹೀಗೆ, ಪಂಚ ನಮಸ್ಕಾರ ಮಂತ್ರಗಳನ್ನು ಯಥಾವತ್ತಾಗಿ ಪಠಿಸುವುದರಿಂದ ಸಮಸ್ತ ಪಾಪಗಳೂ ನಾಶವಾಗುವುವು. ಇದು ಎಲ್ಲ ಪ್ರಕಾರದ ಮಂಗಲಗಳಲ್ಲಿ, ಅತಿ ಮಂಗಲಕಾರವಾದುದುದೆನಿಸಿದೆ.

---

# ಕಾರಣ ಪುರುಷ ಬಸವೇಶ್ವರ (ಮುಂದುವರೆದ ಲೇಖನ ಭಾಗ-4)

—ಡಾ॥ ಎಲ್. ಆರ್. ಹೆಗಡೆ, ಸಿದ್ದಾಪುರ 58355, ಉ. ಕ. ಜಿಲ್ಲೆ.

ಪ್ರಪಂಚದಲ್ಲಿ ಹಿರಹಿಂದಿನಿಂದ ಇಂದಿನವರೆಗೂ ಧರ್ಮಸ್ಥಾಪಕರೂ, ತಪಸ್ವಿಗಳು, ದುಷ್ಟರು ಸಹಾ ಪವಾಡಗಳನ್ನು ಮಾಡುವ ಸಂಗತಿಗಳು ಗ್ರಂಥಗಳಲ್ಲಿಯೂ ಜನರ ಸ್ಮೃತಿಗಳಲ್ಲಿಯೂ ಹಬ್ಬುವ ವೃತ್ತಪತ್ರಿಕೆಗಳ ಸುದ್ದಿಗಳಲ್ಲಿಯೂ ಪ್ರಚಾರ ಹೊಂದುತ್ತಲೇ ಬಂದಿವೆ. ಇವು ಪ್ರವಾಡಗಳೆಂದೂ ಸತ್ಯವಾದವುಗಳಲ್ಲವೆಂದೂ ಸಾರುವವರು ಇರುವಂತೆಯೇ ಪ್ರತ್ಯಕ್ಷವಾಗಿ ಅನುಭವಕ್ಕೆ ಬಂದವುಗಳು ಎಂದೂ ತಿಳಿಯುವವರೂ ಕಾಲಕಾಲದಲ್ಲಿಯೂ ಇರುತ್ತಾರೆ.

ಯೇಸುಕ್ರಿಸ್ತ, ಬುದ್ಧರೇ ಆದಿಯಾಗಿ ಶರೀಫ್ ಮುಹಮ್ಮದರು,ಲಿಂಗೈಕ್ಯ ಸಿದ್ಧಾರೂಢಸ್ವಾಮಿಗಳು ಮುಂತಾದವರಿಂದ ಅಘಟಿತ ಘಟನೆಗಳು ಆಗುತ್ತಿದ್ದುದು ಎಲ್ಲವೂ ಸುಳ್ಳೆಂದು ತಿಳಿಯುವುದು ಇಲ್ಲವೇ, ಎಲ್ಲವೂ ನಡೆದಂತೆಯೇ ಪ್ರಚಾರ ಪಡೆದಿವೆ ಎನ್ನುವುದೂ, ಎರಡೂ ಸತ್ಯಕ್ಕೆ ದೂರವಾಗಿರುವ ಸಾಧ್ಯತೆಗಳಿವೆ.

"Inside Egypt" "ಇಜಿಪ್ಟಿನ ಅಂತರ್ಯದಲ್ಲಿ" ಎಂಬ ಗ್ರಂಥವನ್ನು ಪಾಲ್ ಬ್ರಂಟನ್ ಬರೆದಿದ್ದನು. ಅದರಲ್ಲಿ ಅವನು ಒಬ್ಬದುಷ್ಟ ಇಜಿಪ್ಟಿಯನನು. ಹತ್ತುಅಡಿ ದೂರದಲ್ಲಿ ಇಟ್ಟದ್ದ ಕರವಸ್ತ್ರವನ್ನು ಬರೇ ದೃಷ್ಟಿಯ ಏಕಾಗ್ರತೆಯಿಂದಲೇ ಸುಟ್ಟುಬೂದಿ ಮಾಡಿದ್ದನ್ನು ತಿಳಿಸಿದ್ದನು.

ಕಣ್ಕಟ್ಟು ಎಂಬುದನ್ನು ನಮ್ಮಕಡೆ ನಡೆದ ಸಂಗತಿಯೆಂದು ನಮ್ಮ ಹಿಂದಿನ ಜನ (ಪೂರ್ವಿಕರು) ಹೇಳಿದ್ದುಂಟು. ಈ ಕಣ್ಕಟ್ಟು ಮಾಡುವವ ಒಂದು ಪ್ರದೇಶದ ಸುತ್ತಳತೆಯಲ್ಲಿ ದಿಗ್ಬಂಧನಹಾಕಿ, ಅಲ್ಲಿರುವ ಎಲ್ಲ ಜನರೂ ತನ್ನ ಮೋಡಿಗೆ ಒಳಗಾಗುವಂತೆ ಮಾಡುತ್ತಿದ್ದ. ಒಂದು ಉದಾಹರಣೆ, ಒಬ್ಬ ಭಿಕ್ಷುಕನಂತೆ ಬಂದವನು ಅವನು ಕೇಳಿದಂತೆ ಹಣಕೊಡಲಿಲ್ಲವೆಂದು ಮನೆಯ ನ್ನೇ ನುಂಗುವೆನೆಂದು ಹೆದರಿಸಿದನು.

ಒಬ್ಬನು ದೂರದ ತೆಂಗಿನ ಮರ ಏರಿ, ಅವನೇನು ಮಾಡುವನೆಂದು ನೋಡುತ್ತಿದ್ದನು. ಅಲ್ಲಿಯ ಜನರೆಲ್ಲ ಅವನು ಮನೆಯನ್ನು ನುಂಗುವನೆಂದೇ ಭಾವಿಸಿ ನುಂಗಬೇಡವೆಂದು ಕೂಗಿಕೊಳ್ಳುವಾಗ, ಮರಏರಿದ್ದವನು, ಅವನು ಮನೆಯನ್ನು ನುಂಗುತ್ತಿಲ್ಲ; ಭಾವಣಿಯ ಸೂರಿನ ತುದಿಯ ತೆಂಗಿನ ಮಡಲು ಕಡ್ಡಿಯನ್ನು ಬಾಯಲ್ಲಿ ಕಚ್ಚಿದ್ದಾನೆ, ಇಷ್ಟೇ,ಎಂದನು ಆ ಕಣ್ಕಟ್ಟಗಾರ ಇವನನ್ನು ಚೆನ್ನಾಗಿ ಬಯ್ದನು ತನ್ನ ರಹಸ್ಯವನ್ನು ಬಯಲುಗೊಳಿಸಿದನೆಂದು. ಈ ಘಟನೆಯು ಆ ಮನುಷ್ಯನ, ಸುತ್ತಣ ಜನರ ಮೇಲೆ ವಶೀಕರಣ ವಿದ್ಯೆಯನ್ನು ಪ್ರಯೋಗಿಸಿದನೆಂದು ಸೂಚಿಸುತ್ತದೆ.

ಇಂದಿನ ವೈಜ್ಞಾನಿಕ ಅನ್ವೇಷಣೆಯಿಂದ ಪರಮಾತ್ಮನ ಇರವನ್ನೂ ಹರವನ್ನೂ ತಿಳಿಯಲು ಸಾಧ್ಯವಾಗಲಾರದು. ಪರಮಾತ್ಮ ಸರ್ವಜ್ಞನೂ ಸರ್ವಕರ್ತೃವೂ ಆಗಿರುವುದನ್ನು ಒಪ್ಪಿಕೊಂಡರೆ ಬಸವಣ್ಣನವರ ವಚನದ 'ನೀನೊಲಿದರೆ ಕೊರಡು ಕೊನರುವುದಯ್ಯಾ ನೀನೊಲಿದರೆ ಬರಡು ಹಯನಹುದಯ್ಯಾ; ನೀನೊಲಿದರೆ ಸಕಲ ಪಡಿಪದಾರ್ಥ ಇದರಲ್ಲಿಪ್ಪವು' ಎಂಬುದನ್ನೊಪ್ಪಬೇಕು, ಎರಡನೆಯ ವಾಕ್ಯದಲ್ಲಿ ಬರಡು ಆಕಳು ಹಯನಾಗುವುದನ್ನು ವಿಜ್ಞಾನಿಗಳ ಹೋರ್ಮೋನ್ (ಚೋದನಿ) ಚುಚ್ಚುಮದ್ದನ್ನು ಆಕಳುಗಳಿಗೆ ಕೊಟ್ಟು ಮಾಡಿ ತೋರಿಸಿಯುತ್ತಾರೆ.

ಬೇರೆ ಮೂಲಧಾತುಗಳನ್ನು ಇಲೆಕ್ಟ್ರೊಲಿಸಿಸ್ ಕ್ರಮದಿಂದ ಚಿನ್ನವನ್ನಾಗಿ ಪರಿವರ್ತಿಸುವಲ್ಲಿ ವಿಜ್ಞಾನಿಗಳು ಯಶಸ್ವಿಯಾಗಿರುವರೆಂದು, ಆದರೆ, ಚಿನ್ನದ ಒಂದು ಸಾವಿರ ಪಟ್ಟು ಖರ್ಚು ಇದಕ್ಕೆ ತಗಲುವುದೆಂದು ಪತ್ರಿಕೆಯಲ್ಲಿ ಓದಿದ ನೆನಪಿದೆ. ಪವಾಡವೆಂದು ತಿಳಿಯುವ ಘಟನೆಗಳು ಈಗಿನ ವಿಜ್ಞಾನದಿಂದ ತಿಳಿಯಲಾರದ ಯಾವುದೋ ನಿಸರ್ಗದ ನಿಯಮದಿಂದ ನಡೆಯುತ್ತವೆ ಎಂಬ ಅಭಿಪ್ರಾಯವೂ ಇದೆ.

ಬಸವಣ್ಣನು ಮಾಡಿದನೆನ್ನಲಾಗಿ ವರ್ಣಿತವಾದ ಹಲವು ಪವಾಡಗಳನ್ನು ಬಸವಣ್ಣನು ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಯನ್ನು ಕುರಿತು ಬಿಜ್ಜಳನನ್ನು ಇದರಿಂದ ಮೋಸಗೊಳಿಸಿ ಮರುಳು ಮಾಡಿ ತನ್ನಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡನೆಂದು ಜೈನ ಕವಿಗಳು ಬಿಜ್ಜಳರಾಯಚರಿತ ಮುಂತಾದ ಕಾವ್ಯಗಳಲ್ಲಿ ನಿರೂಪಿಸಿದರು. ಲಿಂ.ಡಾ.ಸಂ.ಶಿ. ಭೂಸನೂರಮಠ ಅವರು ಸಂಪಾದಿಸಿದ ಪ್ರಭುದೇವರ "ಶೂನ್ಯ ಸಂಪಾದನೆ" ಮಹಾಗ್ರಂಥದ ೧೪೧ ನೇ ಪುಟದಲ್ಲಿ ಬಸವಣ್ಣ ಹೇಳಿದನೆನ್ನಲಾದ ಈ ವಚನಗಳನ್ನು ನೋಡಬಹುದು. ಮೂವತ್ತಾರು ಕೊಂಡೆಯವ ಪರಿಹರಿಸಿ, ಎಂಬತ್ತೆಂಟು ಪವಾಡವ ಮೆರೆವಲ್ಲಿ, ಮುನ್ನೂರಐವತ್ತು ಸತ್ತ ಪ್ರಾಣವನೆತ್ತುವಲ್ಲಿ ಅಂದು ನೀನೇನಾಗಿದ್ದೆ ಹೇಳಾ ಕೂ. ಸಂ. ದೇವಾ.

ಶಿವ ಶರಣರ ಹೆಚ್ಚಿಗೆ ದೊರೆತ ಗೀತೆಗಳು ಎಂದು ಅಚ್ಚಾದ ಒಂದುಗೀತದಲ್ಲಿ

ಮೂನ್ನೂರರವತ್ತು ಸತ್ತ ಪ್ರಾಣವನೆತ್ತಿ ಮೆರೆದಿರಿ
ಮೂವತ್ತಾರು ಕೊಂಡೆಯರ ತೋರಿದಿರಿ
ಎಂಬತ್ತಾ ನಾಲ್ಕು ಪವಾಡವನು (ಮೆರೆದಿರಿ)

ಇದಕ್ಕೆ ಕೊನೆಗೆ ಬಸವಣ್ಣಪ್ರಿಯ ಕೂಡಲಚೆನ್ನ ಸಂಗ ಎಂಬ ಅಂಕಿತವಿದೆ

ಇಲ್ಲಿ ಮೂವತ್ತಾರು ಕೊಂಡೆಯರು (ಚಾಡಿಕೋರರು) ಮಂಚಣ್ಣ ಮೊದಲಾಗಿ ಬಿಜ್ಜಳನಿಗೆ ಚಾಡಿ ಹೇಳಿದವರು.

ಈ ಮುನ್ನೂರರವತ್ತು ಸತ್ತ ಪ್ರಾಣ ಎಂಬುದು ಬಿಜ್ಜಳನಿಂದ ದೇಹಾಂತ ಶಿಕ್ಷೆಗೆ ಗುರಿಯಾಗಿ ಬಸವಣ್ಣನಿಂದ ಅದನ್ನು ತಪ್ಪಿಸಿ ಪ್ರಾಣರಕ್ಷಣೆಯಾದ ಘಟನೆಯೇ ಏನೆಂಬುದು ವಿಚಾರಣೀಯವಾಗಿದೆ.

ಎಂಬತ್ತೆಂಟು ಪವಾಡವ ಮಾಡಿ, ಪಗರಣದ ಜೋಹದಂತಾಯಿತ್ತಯ್ಯ ಎನ್ನ ಭಕ್ತಿ ಎಂಬ ಬಸವಣ್ಣನ ವಚನದಿಂದ ಪಗರಣದ ಜೋಹದಂತೆ ಎಂಬ ದೃಷ್ಟಾಂತ ರೂಪವಾದ ಉಪಮೆಯು ಅಸಾಮಾನ್ಯವಾಗಿದೆ, ವಚನದ ತೀವ್ರವಾದ ಪಶ್ಚಾತ್ತಾಪ ಭಾವವು ಇದು ಬಸವಣ್ಣನವರೇ ರಚಿಸಿದ ವಚನಗಳನ್ನು ಬಾಗಿದ ತಲೆಯು ಮುಗಿದ ಕೈಯ್ಯ ಬಸವನಾಗಿ ಭಕ್ತಿಸಿದ್ಧಿಯನ್ನು ಪಡೆದ ಮೊದಲೇ ಮಾಡಿ ಅಹಂಕಾರಿಯಾ ಗಿದ್ದರೆ ಇಂದ್ರಜಾಲಶಕ್ತಿಯಿಂದ ಮಾಡಿದ ಪವಾಡಗಳೇ ಎಂಬ ಸಂದೇಹವು ನನಗೆ ಉಂಟಾಗುತ್ತದೆ.

ಡಾ|| ಎಂ. ಎಂ. ಕಲ್ಬುರ್ಗಿಯವರು ನಾಲ್ಕು ವಚನಗಳಲ್ಲಿ ಅಣ್ಣನವರ ಎಂಬತ್ತೆಂಟು ಪವಾಡಗಳ ಉಲ್ಲೇಖವಿರುವುದನ್ನು ಎತ್ತಿ ತೋರಿಸಿ, ಇವು ಘಟಿತ ಘಟನೆಗಳೆಂದೆನ್ನ ಬೇಕಾಗುತ್ತದೆ. ಆದರೆ ಪವಾಡಗಳ ವಿವರ ಉಲ್ಲೇಖ ವಚನಗಳಲ್ಲಿಲ್ಲ ಎಂದು ಬರೆದಿದ್ದರು. (ಪು.ಕ.ಸಂಪುಟ ಸಂ೪) ಪವಾಡಗಳು ಮುಖ್ಯವಲ್ಲ, ಅವುಗಳ ಹಿಂದಿರುವ ಮನೋಧರ್ಮ ಮುಖ್ಯವಾದುದು ಎಂದು ಡಾ|| ಎಂ. ಶ್ರೀನಿವಾಸಮೂರ್ತಿಯವರು ಬರೆದುದನ್ನು ಪವಾಡವೆಂಬುದು ಸತ್ಯದ ಶ್ರೀಮುಖಕ್ಕೆ ಹಚ್ಚಿ ಮುಚ್ಚಿದ ಸುವರ್ಣಪಾತ್ರೆ ಎಂದು ಡಾ|| ಎಲ್. ಬಸವರಾಜು ಬರೆದುದನ್ನು ನೆನಪಿನಲ್ಲಿಟ್ಟು ಕೊಂಡಿರಬೇಕು. ಪವಾಡಗಳ ವರ್ಣನೆಯ ಹಿನ್ನೆಲೆಯಲ್ಲಿ ಬಸವಣ್ಣನದೆಂದು ತಿಳಿಯಲಾಗಿರುವ ಕೆಲವು ವಚನಗಳಿವೆ. ಅವು ಮುಂದಿನ ಶಿವಕವಿಗಳು ಬಣ್ಣಿಸಿದ ಪವಾಡಗಳಿಗೆ ಮೂಲ ವಾಗಿದ್ದಿರಬಹುದು.

ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ! ನಿಮ್ಮ ಧರ್ಮ ಬೊಬ್ಬಿಡದಿರಿಂ ಭೋ! ಧರ್ಮ ಅಡದಿರಿಂ ಭೋ ಅಲ್ಲಿ ಉಂಬರೆಯು ಸಂಗ, ಇಲ್ಲಿ ಉಂಬರೆಯು ಸಂಗ ಏಕೋಭಾವವಾಗಿತ್ತಾಗಿ ಎಂಬ ಬಸವಣ್ಣನ ವಚನವು ಕಳ್ಳರು ಭಕ್ತರ ವೇಷದಿಂದ ಬಂದು ಆಕಳು-ಕರು ಸಹ ಅಪಹರಿಸಿದ್ದ ಕಥಾಭಾಗಕ್ಕೆ ಪ್ರೇರಕವಾಗಿದೆ.

ಹರಿಹರನು ಪುಟ ೬೧ರಲ್ಲಿ
ಎಲೆಲೆ ತಾಯ್ ಕಮಿಗೂಡಿರೇ ಬೇಗದೊಳ್ ಬಿಟ್ಟು
ಎಲೆಲೆ ಅಗಲಿರಲಾರ್ಪವೇ ಮಕ್ಕಳಂ ಬಿಟ್ಟು
ಎಂದು ಬಸವಣ್ಣನ ದಯಾ ಪರತೆಯನ್ನು ಬಹಳ ಸೊಗಸಾಗಿ ತೋರಿಸಿದ್ದನು

ಧರಣಿಯ ಮೇಲೊಂದು ಹಿರಿದೊಂದು ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ ಒಮ್ಮನವಾದಡೆ ಒಡನೆ ನುಡಿವನು, ಇಮ್ಮನವಾದಡೆ ನುಡಿಯನು ಕಾಣಿಯಸೋಲ ಅರ್ಥಗಾಣಿಯಗೆಲ್ಲ ಬಲುಜಾಣ ನಮ್ಮ ಕೂಡಲ ಸಂಗಮ ದೇವಾ.

ಇದು ಹರಿಹರನ ಮಹಾದೇವಸೆಟ್ಟಿಯ ಪ್ರಸಂಗಕ್ಕೆ ಪೂರ್ವಿಕವಾಗಿದೆ. ಇದನ್ನು "ಬಸವಣ್ಣನವರು" ಎಂಬ ಗ್ರಂಥದಲ್ಲಿ ಡಾ|| ಎಂ. ಚಿದಾನಂದ ಮೂರ್ತಿಯವರು ಕಳಿಂಗ ದೇಶದ ಮಹದೇವ ಶೆಟ್ಟಿಯೆಂಬ ಭಕ್ತನು ಬಂದು ಬಸವಣ್ಣನನ್ನು ಮುತ್ತು ಮಾಣಿಕ್ಯ ಕೇಳಿ ಪರೀಕ್ಷಿಸಲು ನಿರ್ಧರಿಸಿದಂತೆಯೂ ಬಸವಣ್ಣನ ಪ್ರಾಮಾಣಿಕ ಮಹಾಭಕ್ತಿಯನ್ನು ತಿಳಿದು ಲಜ್ಜಿಸಿ ಗಾಡಿತುಂಬ ಧಾನ್ಯಕೊಡುವಂತೆ ಬೇಡಿದಂತೆಯೂ ಬಸವಣ್ಣ ಅವನಿಗೆ ಅಪಾರ ಸಂಪತ್ತನ್ನು ಕೊಟ್ಟಂತೆಯೂ ಬರೆದಿದ್ದಾರೆ (ಪುಟ 71-72)

ಬಸವಣ್ಣನ ಹಲವು ವಚನಗಳಲ್ಲಿ ಶಿವಭಕ್ತರಾದ ಅಂತ್ಯಜರು ಶ್ರೇಷ್ಠರೆಂಬುದನ್ನು ಅನಾಚಾರಿ ಬ್ರಾಹ್ಮಣರೇ ಹೊಲೆಯರೆಂಬುದನ್ನು ತಿಳಿಸಲಾಗಿದೆ. ಹೊಲೆತನವು ಕುಲದಲ್ಲಿಲ್ಲ ದುಷ್ಕರ್ಮದಲ್ಲಿದೆ ಎಂದು ಸೂಚಿಸಿದ್ದಾನೆ.

ಇವುಗಳಿಂದ ಪ್ರೇರಣೆಯನ್ನು ಪಡೆದು ಹರಿಹರನು ಅಂತ್ಯಜರಾದ ಶಿವಶರಣರ ದೇಹದಲ್ಲಿ ರಕ್ತದ ಬದಲು ಹಾಲು ಬಂದ ಪವಾಡವನ್ನು ಬಣ್ಣಿಸಿ ಕಥೆಯನ್ನು ಮಾಡಿದನು (ಬ.ರಾ.ದೇರೆಗಳೆ. ಪುಟ ೬೮-೬೯)

ಸಿದ್ಧದಂಡಾಧಿಪನ ಕರಣಿಕರು ಮಾಡಿದ ತಪ್ಪನ್ನು ಕಂಡು ಹಿಡಿದು ಬಸವಣ್ಣನು ಅದರಿಂದಾಗಲಿದ್ದ ಅಧಿಕ ಮೊತ್ತದ ನಷ್ಟವನ್ನು ತಪ್ಪಿಸಿದನೆಂದೂ ಇದರಿಂದ ಸಂತಸ್ಟು ನಾದ ಸಿದ್ಧದಂಡಾಧಿಪನೂ ಬಸವಣ್ಣನನ್ನು ಗಣಕನೆಂದು ನೇಮಿಸಿಕೊಂಡನೆಂದೂ ಹರಿಹರನು ಸಹಜತೆಗೆ ಭಂಗ ಬಾರದಂತೆ ವರ್ಣಿಸಿದ್ದನು.

ಭೀಮಕವಿಯು ಆಕಾಶದಿಂದ ಬಿದ್ದ ಓಲೆಯನ್ನು ಬಸವಣ್ಣ ಓದಿ ಅರ್ಥಮಾಡಿ ಬಿಜ್ಜಳನಿಗೆ ಚಾಲುಕ್ಯಾನ್ವಯದ ಮುನ್ನ ನಿಕ್ಷೇಪಿಸಿದ ಎಂಬತ್ತೇಟು ಕೋಟಿಧನ ನಿನ್ನ ಸಿಂಹಾಸನದ ಕೆಳಗಿದೆ.

ಅಗೆಸು ಎಂದು ಹೇಳಿದ ಮೇಲೆ ಆ ಗುಪ್ತನಿಧಿ ಬಿಜ್ಜಳನಿಗೆ ದೊರಕಿತು ಎಂದು ಬಣ್ಣಿಸಿದನು. ಆಕಾಶದಿಂದ ಓಲೆ ಬಿದ್ದುದರ ಬದಲಿಗೆ ಯಾವುದೋ ತಾಮ್ರ ಶಾಸನದ ದಲ್ಲಿನ ಗೂಢಭಾಷೆಯ ಸಂಕೇತವನ್ನು ಓದಿ ಅದನ್ನು ಅರ್ಥವಿಸಿದುದರ ಪರಿಣಾಮವಾಗಿ ದ್ರವ್ಯರಾಶಿಗೆ ಬಸವಣ್ಣನೇ ಕಾರಣನೆಂದು ಬಿಜ್ಜಳನು ಅದರ ಒಂದು ಭಾಗವನ್ನು ಬಸವಣ್ಣನಿಗೆ ನೀಡಿರಬಹುದೇನೋ

ಲಾಂಛನವ ಬಸವಣ್ಣನ ಕಂಡು ನಂಬುವೆ
ಆವರಂತರಂಗವ ನೀನೇ ಬಲ್ಲೆ.

ಮುಂತಾಗಿ ವಚನ ಬರೆದುದನ್ನು ಲೇವಡಿ ಮಾಡಲು ಹೂಡಿದ ಕೆಲವು ಜನರ ಕುಚೋದ್ಯದ ಆಟ ಇಲ್ಲವೆ, ಹೂಟವೆಂಬಂತೆ ಕಾಣುವ ಘಟನೆಯು ಬಿಜ್ಜಳನ ರಾಣಿಯರನ್ನು ಶಿವಭಕ್ತರ ವೇಷದಿಂದ ಕಳಿಸಿದರೆಂಬ ಸರಗತಿಯಿಂದ ತಿಳಿವಂತಿದೆ.

ಹೀಗೆ ಕಳಿಸಿದ್ದು ನಿಜವಾಗಿದ್ದರೆ ಬಸವಣ್ಣನು ಅವನ್ನು ಶಿವಭಕ್ತರೆಂದೇ ನಂಬಿ ಶಿರಬಾಗಿ ನಮಿಸಿದುದನ್ನು ನಂಬಬೇಕಾಗುತ್ತದೆ,

ಲಾಂಛನವ ಕಂಡುನಂಬುವೆ ಎಂದು ಹೇಳಿಯೇ ಇದ್ದನು.

ಆದರೆ ಬಸವಪುರಾಣದಲ್ಲಿ ಬಂದರೀತಿಯಲ್ಲಿ ಆ ರಾಣಿಯರು ನಿಜವಾಗಿಯೂ ಗಂಡಸರಾಗಿ ಪರಿವರ್ತಿತರಾದರೆಂಬ ಪವಾಡವು ನಂಬಲರ್ಹವಾಗಿಲ್ಲವೆಂಬುದು ಸ್ಪಷ್ಟವಾಗಿದೆ.

ಆದರೆ, ಇಲ್ಲಿ ಪವಾಡದ ಒಂದು ಮುಖವು ಸುಳ್ಳಾದರೂ ಬಸವಣ್ಣನವರ ಮುಗ್ಧ, ಸರಳ, ವ್ಯಕ್ತಿತ್ವವೂ ಶರಣರನ್ನು ಶಿವನೆಂದೇ ನಂಬುವ ನಿಷ್ಠಾಭಕ್ತಿಯು ಸ್ಪಷ್ಟವಾಗುತ್ತದೆ. ದುಷ್ಟರನ್ನು ಸಜ್ಜನರನ್ನಾಗಿ ಪರಿವರ್ತಿಸುವ ಪವಾಡಗಳು ಮಹಾಪುರುಷರಿಂದ ನಡೆಯುತ್ತವೆ.

ಕೆಲವು ವ್ಯಕ್ತಿಗಳ ಜೀವಿತಕಾಲದಲ್ಲಿಯೇ ಅವರು ಪವಾಡ ಪುರುಷರೆಂದು ಪ್ರವಾದವು ಹುಟ್ಟಿ ಪಸರಿಸುತ್ತದೆ. ಅವರು ಕಾಲವಶರಾದ ಅನಂತರ ನಲವತ್ತು ವರ್ಷ ಕಳೆಯುವಷ್ಟರಲ್ಲಿ ಅವರ ಜೀವಿತದ ಹಲವಾರು ಘಟನೆಗಳು ಪವಾಡಸ್ಪರ್ಶ ಹೊಂದಿ ಹಬ್ಬಿ ಜನಸಾಮಾನ್ಯರಲ್ಲಿ ಅವರ ಕುರಿತು ಭಯ ಭಕ್ತಿ ಹೆಚ್ಚಾಗಲು ಕಾರಣವಾಗುತ್ತದೆ.

# ಮಕ್ಕಳಿಗೆ ಹಸಿವನ್ನು ಪ್ರಚೋದಿಸುವ ಔಷಧಗಳು ಹಾಗು ಟಾನಿಕ್‌ಗಳು ಬೇಕೆ?

**ಡಾ|| ನವೀನ್. ಜಿ.**

**ಡಾ|| ಮಹಾಲಕ್ಷ್ಮಿ. ಆರ್.** ಪದ್ಮ ಕ್ಲಿನಿಕ್, ಲಿಂಕ್‌ರಸ್ತೆ, ತಿ. ನರಸೀಪುರ-571124

ಪೋಷಕರೆ ಗಮನಿಸಿ. ಇಂತಹ ಔಷಧಗಳ ಬಗ್ಗೆ ಎಚ್ಚರಿಕೆ! ಪೋಷಕರ ಒತ್ತಾಯಕ್ಕೆ ಮಣಿದು ವೈದ್ಯರುಗಳು ಬರೆದುಕೊಡುವ ಹಸಿವು ಹೆಚ್ಚಿಸುವ ಔಷಧಗಳು ಎಷ್ಟೋ ಭಾರಿ ದುಷ್ಪರಿಣಾಮಗಳನ್ನುಂಟು ಮಾಡಿರುವ ಅನೇಕ ನಿದರ್ಶನಗಳಿವೆ. ಹಸಿವು ಇಂಗುವಿಕೆ ಅಥವಾ ಆಹಾರವನ್ನು ತಿರಸ್ಕರಿಸುವಿಕೆ ಒಂದು ಖಾಯಿಲೆಯಲ್ಲ, ಮಗು ತನ್ನ ಅವಶ್ಯಕತೆಗೆ ತಕ್ಕಂತೆ ಆಹಾರ ಸೇವಿಸುತ್ತದೆ. ಮೊದಲ ವರ್ಷ ಮಗು ಆಹಾರ ತೆಗೆದುಕೊಂಡಷ್ಟು 2ನೇ ವರ್ಷ ತೆಗೆದುಕೊಳ್ಳುವುದಿಲ್ಲ. ಮೊದಲ ವರ್ಷ ಮಗು 6-7 ಕೆ.ಜಿ. ತೂಕ ಹೆಚ್ಚಿಸಿಕೊಳ್ಳುತ್ತದೆ, 2ನೇ ವರ್ಷದಲ್ಲಿ 2-3 ಕೆ.ಜಿ. ತೂಕ ಹೆಚ್ಚುತ್ತದೆ. ಇದರ ಬಗ್ಗೆ ತಿಳುವಳಿಕೆಯಿದ್ದೂ ವೈದ್ಯರುಗಳನೇಕರು ಹಸಿವು ಉಂಟು ಮಾಡುವ ಔಷಧಗಳನ್ನು ಬರೆದು ಕೊಟ್ಟು ಪೋಷಕರಿಗೆ ಸಂತೋಷವನ್ನುಂಟು ಮಾಡುತ್ತಾರೆ. ಪೋಷಕರು ಔಷಧಿಯ ಹೆಸರು, ಯಾತಕ್ಕಾಗಿ ಕೊಟ್ಟಿದ್ದಾರೆ, ಅಡ್ಡ ಪರಿಣಾಮಗಳೇನೆಂದು ತಿಳಿದುಕೊಳ್ಳುವ ಗೋಜಿಗೆ ಹೋಗುವುದಿಲ್ಲ.

ಹಸಿವು ಇಂಗುವಿಕೆಗೆ ಹಲವಾರು ಕಾರಣಗಳಿರುತ್ತವೆ. ಉದಾ: ಅಪೌಷ್ಠಿಕತೆ, ಜಂತು ಹುಳಗಳು, ಬೇರೂರಿದ ಖಾಯಿಲೆಗಳು, ಹೆಪಟೈಟಿಸ್ ಮನೋದ್ವೇಗದ ತೊಂದರೆಗಳು, ಸೋಂಕುಗಳು etc, ಮೂಲ ತೊಂದರೆಗಳಿಗೆ ಔಷಧೋಪಚಾರ ನೀಡುವುದು ಅಗತ್ಯ. ಹಸಿವು ತಂತಾನೆ ವಾಪಸ್ಸಾಗುತ್ತದೆ. ಖಾಯಿಲೆಗಳಿದ್ದಾಗ ಹಸಿವೆ ಕಡಿಮೆಯಿರುವುದು ನಮಗೆಲ್ಲರಿಗೂ ಅನುಭವವಾಗಿರುತ್ತದೆ. ಅಂತೆಯೆ ಖಾಯಿಲೆ ವಾಸಿಯಾಗುತ್ತಿದ್ದಂತೆ ಹಸಿವು ವಾಪಸ್ಸಾಗುತ್ತದೆ. ಈ ಸಮಯದಲ್ಲಿ, ರುಚಿಯಾಗಿರುವ, ಸುಲಭವಾಗಿ ಜೀರ್ಣವಾಗಬಲ್ಲ ಪೋಷಕಾಂಶಯುಕ್ತ ಆಹಾರವನ್ನು ಪದೇಪದೇ ಆಗಾಗ ನೀಡಬೇಕು.

ಸಿಪ್ರೋಹೆಪ್ಟಿಡಿನ್ ಎಂಬ ಹಿಸ್ಟಮಿನ್ ವಿರೋಧ ಔಷಧಿಯನ್ನು ಹಸಿವು ಪ್ರಚೋದನೆಗೆಂದು ಬಳಕೆಯಲ್ಲಿದ್ದು ವಿಚಾರ ಮಾಡಬೇಕಾದ ಗಂಭೀರ ವಿಷಯ-ವಾಗಿದೆ. ದ ನ್ಯೂನಪೋಷಣೆಯಿರುವ ಕ್ಷಯ ಪೀಡಿತ ಮಕ್ಕಳಲ್ಲಿ ಈ ಔಷಧ ಹಸಿವನ್ನುಂಟು ಮಾಡಿ ತೂಕ ಹೆಚ್ಚಾಗಲು ಸಹಕರಿಸುತ್ತದೆ. ಆದರೆ ಇದು "ಅನೋರೆಕ್ಸಿಯ ನರ್‌ವೋಸ" ಎಂಬ ಖಾಯಿಲೆಯಲ್ಲಿ ಪ್ರಯೋಜನವಾಗುವುದಿಲ್ಲ.

ಈ ಸಿಪ್ರೋ ಹೆಪ್ಟಿಡಿನ್‌ನ್ನು ಮಕ್ಕಳಿಗೆ ಡ್ರಾಪ್ಸ್, ಗುಳಿಗೆ ಹಾಗು ಟಾನಿಕ್‌ಗಳ ಮೂಲಕ ಹಸಿವು ಪ್ರಚೋದಿಸಲು ಎಲ್ಲಾಮಕ್ಕಳಿಗೆ ಸಾರ್ವತ್ರಿಕವಾಗಿ (ಸುಮಾರು12./. ಮಕ್ಕಳಲ್ಲಿ) ನೀಡುತ್ತಿರುವುದು ಹಾನಿಕರ. ಸಿಪ್ರೋಹೆಪ್ಟಿಡಿನ್ ಒಂದು ಹಿಸ್ಟಮಿನ್ ರೋಧಕ ಔಷಧಿ. ಒಗ್ಗದಿಕೆ ಅಥವಾ ಅಲರ್ಜಿಗಳಲ್ಲಿ ಇದರ ಉಪಯೋಗವಿದೆ.

ಸಿಪ್ರೋಹೆಪ್ಟಿಡಿನ್‌ನ್ನು ಲೈಸಿನ್ ಎಂಬ ಅವಶ್ಯಕ ಅಮೈನೋ ಆಮ್ಲದ ಜೊತೆ ಅಥವಾ ಪೆಪ್ಟೋನ್. ಎಂಬ ಸಸಾರಜನಕದ ಜೊತೆ ಟಾನಿಕ್‌ಗಳ ರೂಪದಲ್ಲಿ ನೀಡಲಾಗುತ್ತಿದೆ. ಲೈಸಿನ್ ಮಕ್ಕಳ ಬೆಳವಣಿಗೆಗೆ ಬೇಕಾದ ಅವಶ್ಯಕ ಅಮೈನೋ ಆಮ್ಲ ಇದನ್ನು ಸಸಾರಜನಕ, 'ಬಿ' ಗುಂಪಿನ ಜೀವಸತ್ವಗಳು ಹಾಗು ಖನಿಜಾಂಶಗಳ ಜೊತೆಗೆ ನೀಡುವುದು ಉತ್ತಮ. ಲೈಸಿನ್ ನ್ನು ಸಿಪ್ರೋಹೆಪ್ಟಿಡಿನ್ ಜೊತೆಗೆ ನೀಡುವ ಅವಶ್ಯವಿಲ್ಲ. ಕೆಲವು ಅಧ್ಯಯನಗಳಲ್ಲಿ ಸಿಪ್ರೋಹೆಪ್ಟಿಡಿನ್‌ನಿಂದ ಬೆಳವಣಿಗೆ ಹಾಗೂ ತೂಕ ಹೆಚ್ಚಾಗಿರುವುದು ಕಂಡು ಬಂದರೂ ಇದು ಸಾಮರಸ್ಯವಿಲ್ಲದೆ ತಾತ್ಕಲಿಕವಾಗಿದ್ದು ಇದರ ಪರಿಣಾಮಕತ್ವ ಶಕ್ತಿ ಔಷಧವನ್ನು ಹಿಂತೆಗೆದುಕೊಂಡ ನಂತರ ತಲೆಕೆಳಗಾಗುತ್ತದೆ (ಹಸಿವು ಪೂರ್ವಸ್ಥಿತಿಗೆ ಮರಳುತ್ತದೆ.) ವಿಶ್ವ ಆರೋಗ್ಯ ಸಂಸ್ಥೆಯ ವರದಿಯ ಪ್ರಕಾರ ಹಸಿವು ಪ್ರಚೋದಿಸುವ ಔಷಧಿಗಳೆಂದು ಪ್ರಸ್ತಾಪ ಮಾಡಿರುವ ಔಷಧಗಳು ಹಾಗು ಮಿಶ್ರಣಗಳು ಹಸಿವಿನ ಮೇಲೆ ಯಾವ ಪರಿಣಾಮವನ್ನೂ ಬೀರುವುದಿಲ್ಲ. ಆದುದರಿಂದ ಇಂತಹ ತಯಾರಿಕೆಗಳನ್ನ ಉಪಯೋಗಿಸಬಾರದು. ಹಸಿವು ಹೆಚ್ಚಿಸಲು (ಪ್ರಚೋದಿಸಲು) ಮಕ್ಕಳಿಗೆ ನೀಡುವ ಸಿಪ್ರೋಹೆಪ್ಟಿಡಿನ್ ಪ್ರಮಾಣ ಹೆಚ್ಚಾಗಿದ್ದು ನಮ್ಮ ದೇಹದಲ್ಲಿನ ಬೆಳವಣಿಗೆ ಹಾರ್ಮೋನ್ (Growth harmone) ಬಿಡುಗಡೆಯನ್ನು ಅಡಗಿಸುತ್ತದೆ. ಇದರಿಂದ ಮಕ್ಕಳ ಬೆಳವಣಿಗೆ ಕುಂಠಿತಗೊಳ್ಳಬಹುದು. ಈ ಔಷಧಿಯ ದೀರ್ಘಾವಧಿಯ ಬಳಕೆಯಿಂದ ಮಗುವಿನ ಮಾನಸಿಕ ಬೆಳವಣಿಗೆಯ ಪರಿಣಾಮಗಳ ಬಗ್ಗೆ ಮೇಲಾಗುವ ಪರಿಣಾಮಗಳ ಬಗ್ಗೆ ಏನೂ ಖಚಿತವಾಗಿ ತಿಳಿದು ಬಂದಿಲ್ಲ.

ಸಿಪ್ರೋಹೆಪ್ಟಿಡಿನ್ ನ ಅಡ್ಡ ಪರಿಣಾಮಗಳೆಂದರೆ— ಮತ್ತು ಬರುವಿಕೆ, ಬಾಯಿ ಒಣಗುವಿಕೆ, ತೂಕಳಿಸುವಿಕೆ...........ಶಿಶುಗಳಲ್ಲಿ ಅತೀ ಹೆಚ್ಚು ಪ್ರಮಾಣದಲ್ಲಿ ಸೇವಿಸಿದಾಗ (ಜೀವಿಷ ಅಥವಾ toxicity ಉಂಟಾಗಿ) ಉದ್ರೇಕತೆ, ಭ್ರಮೆ, ತತ್ತರಿಕೆ, ಅಸಮಾಂಜಸ್ಯ ನಡವಳಿಕೆ, ಅದಿರು ಸೆಡೆತ (athetosis) ಸೆಳವು ಮುಂತಾದವುಗಳುಂಟಾಗಬಹುದು. ಮೆದುಳಿನ ಸೆರೋಟೋನಿನ್ ಜೀವಸ್ತು ಕರಣದ ಮೇಲೆ ಸಿಪ್ರೋ ಹೆಪ್ಟಿಡಿನ್ ನ ಪರಿಣಾಮದ ವಿಷಯ ಜಟಿಲವಾಗಿದೆ. ದೀರ್ಘಾವಧಿಯ ಉಪಯೋಗದಿಂದ ಪಿಟ್ಯೂಟರಿ-ಅಡ್ರಿನಲ್ ಗಂಥಿಗಳ ಲಂಬಕಿರಣ [Pitutory-adrenal

axis) ಗಳ ಮೇಲಿನ ಅವರೋಧ ತಡೆಯ ಬಗ್ಗೆ ವಿಷಧವಾದ ಅಧ್ಯಯನದ ಅವಶ್ಯಕತೆಯಿದೆ. ಅಲ್ಲಿಯವರೆಗೆ ಮುಕ್ತವಾಗಿ ಸಿಪ್ರೋಹೆಪ್ಟಿಡಿನ್ ನ್ನು ಸಾಮಾನ್ಯ ಹಸಿವು ಪ್ರಚೋಧಕ ಔಷಧಿಯಾಗಿ ಉಪಯೋಗಿಸುವುದು ಸಮರ್ಥನೀಯವಲ್ಲ.

ಸಿಪ್ರೋಹೆಪ್ಟಿಡಿನ್‌ನ್ನು ನಮ್ಮ ನೆರೆಯ ದೇಶವಾದ ಪಾಕಿಸ್ತಾನದಲ್ಲಿ ಹಿಂತೆಗೆದುಕೊಳ್ಳಲಾಗಿದೆ. ಅಮೇರಿಕ ಹಾಗು ಇಂಗ್ಲೆಂಡ್ ದೇಶಗಳಲ್ಲಿ ಸಿಪ್ರೋಹೆಪ್ಟಿಡಿನ್‌ನ್ನು ಹಸಿವು ಪ್ರಚೋಧಕ ಔಷಧಿಯನ್ನಾಗಿ ಬಳಸುವುದಿಲ್ಲ. ಸಿಪ್ರೋಹೆಪ್ಟಿಡಿನ್‌ಯುಕ್ತ ಔಷಧಗಳು (ಅಪಿಟಮಿನ್, ಸಿಪ್ಲಾಕ್ಟಿನ್, ಸಿಪ್ರೋವಾಲ್, ಪ್ರಾಕ್ಟಿನ್, ಪ್ರಾಕ್ಟಿನ್-ಇ. ಎನ್., ಓರಾಕ್ಸಿನ್. ಸಿಪ್. ಎಲ್.....) ಅಡ್ಡಪರಿಣಾಮವನ್ನುಂಟು ಮಾಡಿ ರಕ್ತಹೀನತೆ, ಸೋಂಕುಗಳಿಗೆ ಬಲಿಯಾಗುವಿಕೆ, ಮಗುವಿನ ಜೀರ್ಣಾಂಗ ಹಾಗು ಕೇಂದ್ರ ನರಮಂಡಲದ ಮೇಲೆ ದುಷ್ಪರಿಣಾಮಗಳನ್ನುಂಟುಮಾಡಬಹುದು. ಅಸ್ತಮ ದಿಂದ ನರಳುತ್ತಿರುವ ಮಕ್ಕಳಲ್ಲಿ ಆ ರೋಗವನ್ನು ಉಲ್ಬಣಗೊಳ್ಳುವಂತೆ ಮಾಡಬಹುದಾದ್ದರಿಂದ ಈ ಔಷಧಗಳನ್ನು ಉಪಯೋಗಿಸಬಾರದು.

ಕಡಿಮೆ ಹಸಿವೆ ಹಾಗೂ ನಿತ್ರಾಣವಿರುವವರಿಗೆ ಬೇಕಾಗಿರುವುದು ಸಾಕಷ್ಟು ಮಿಶ್ರಿತ ಸಮತೋಲನ ಆಹಾರ. ಇದಕ್ಕೆ ಯಾವ ಟಾನಿಕ್‌ಗಳೂ ಬೇಕಾಗಿಲ್ಲ. ಆದುದರಿಂದ ಪೋಷಕರು ಇನ್ನಾದರೂ ವೈದ್ಯರನ್ನು ಹಸಿವು ಪ್ರಚೋಧಕ ಹಾಗು ಟಾನಿಕ್‌ಗಳನ್ನು ನೀಡಲು ಪೀಡಿಸುವುದನ್ನು ಬಿಡಬೇಕು. ವೈದ್ಯರುಗಳೂ ಸಹ ಔಷಧ ಚೀಟಿಗಳಲ್ಲಿ ಇಂತಹ ಔಷಧಗಳನ್ನು ಗೀಚುವ ಬದಲು, ಪೋಷಕರಿಗೆ ಸಾವಧಾನವಾಗಿ ಮಕ್ಕಳಿಗೆ ಅಗತ್ಯವಾದ ಸರಿಯಾದ ಪ್ರಮಾಣದ ಸಮತೋಲನ ಆಹಾರ ಹಾಗು ಆರೋಗ್ಯಕರವಾದ ಆಹಾರ ಸೇವನೆಯ ಬಗ್ಗೆ ಶಿಕ್ಷಣ ನೀಡುವುದು ಬಹುಮುಖ್ಯ.

ಒಂದು ಮಗುವಿನ ಆಹಾರದ ಅವಶ್ಯಕತೆ ಇನ್ನೊಂದು ಮಗುವಿನ ಆಹಾರದ ಅವಶ್ಯಕತೆಗಿಂತ ಭಿನ್ನವಾಗಿರುತ್ತದೆ. ಆದುದರಿಂದ ಮಕ್ಕಳ ಆಹಾರದ ಸೇವನೆ ಹಾಗು ಬೆಳವಣಿಗೆಯನ್ನು ಬೇರೆ ಮಕ್ಕಳೊಂದಿಗೆ ಹೋಲಿಕೆ ಮಾಡಬಾರದು. ಖಾಯಿಲೆಗಳಿದ್ದಾಗ ಹಸಿವು ಕಡಿಮೆಯಾಗಿರುತ್ತದೆ. ಖಾಯಿಲೆ ಗುಣವಾದ ಮೇಲೆ ಹಸಿವು ವಾಪಸ್ಸಾಗುತ್ತದೆ. ಮಗು ಮೊದಲಿಗಿಂತ ಹೆಚ್ಚು ಆಹಾರ ಸೇವಿಸಬಹುದು. ಮಗುವಿನ ತೂಕದಲ್ಲಿ ಹೆಚ್ಚಳ ಹಾಗು ಎತ್ತರದ ಬೆಳವಣಿಗೆ ಸರಿಯಾಗಿದ್ದರೆ ಆತ ಆಹಾರವನ್ನು ಸರಿಯಾಗಿ ಸ್ವೀಕರಿಸುತ್ತಿದ್ದಾನೆಂದು ಅರ್ಥ. ಮಗುವಿನ ಬೆಳವಣಿಗೆ ಕುಂಠಿತವಾಗಿದ್ದರೆ ವೈದ್ಯರ ಸಲಹೆ ತೆಗೆದುಕೊಳ್ಳಿ.

ಗಮನಾರ್ಹ ಹಸಿವು ಇಂಗುವಿಕೆಯಿದ್ದ ಮಕ್ಕಳಲ್ಲಿ ಚಟುವಟಿಕೆ, ಚಹರೆ ಹಾಗು ಬೆಳವಣಿಗೆಯನ್ನು ಗಮನಿಸಬೇಕು. ಎತ್ತರ-ತೂಕಗಳನ್ನು ಬೆಳವಣಿಗೆ ಪಟ್ಟಿಯಲ್ಲಿ (Groth chart) ನಮೂದಿಸಿ ಅಪೇಕ್ಷಿತ ಬೆಳವಣಿಗೆಯ ಮಾದರಿಯಲ್ಲೇನಾದರೂ ಕ್ರಮ ತಪ್ಪಿದೆಯೇ ಎಂದು ತಿಳಿಯಬೇಕು. ತೀವ್ರವಾದ ಅಥವಾ ಬೇರೂರಿದ ಖಾಯಿಲೆಗಳಿದ್ದಾಗ ಬೆಳವಣಿಗೆ ಕುಂಠಿತವಾಗಿದ್ದಲ್ಲಿ ಹೆಚ್ಚಿನ ತಪಾಸಣೆ ಅಗತ್ಯ. ಕುಂಠಿತ ಬೆಳವಣಿಗೆ ಇಲ್ಲದಿದ್ದಲ್ಲಿ ಹಸಿವು ಇಂಗುವಿಕೆ ಆಹಾರದ ಸೇವಿಸುವಿಕೆಯ ಬಗ್ಗೆ ತಪ್ಪು ತಿಳುವಳಿಕೆಯಿಂದ ಉಂಟಾಗುತ್ತದೆ. ಮಗುವಿನ ಶಕ್ತಿಯ ಅವಶ್ಯಕತೆ ಮಗು ಬೆಳೆದಂತೆಲ್ಲ ಕಡಿಮೆಯಾಗುತ್ತದೆ. ಮಗುವಿನ ಬೆಳವಣಿಗೆ ಮೊದಲ ದಿನಗಳಲ್ಲಿ ಹೆಚ್ಚಾಗಿದ್ದು ಶೀಘ್ರವಾಗಿದ್ದು 2ನೆ ವರ್ಷದ ವೇಳೆಗೆ ನಿಧಾನವಾಗುತ್ತದೆ.

ದಿನದಿಂದ ದಿನಕ್ಕೆ, ಒಂದೇ ದಿನದಲ್ಲಿ ಆಹಾರದ ಸೇವಿಸುವಿಕೆಯಲ್ಲಿ ವ್ಯತ್ಯಾಸವಾಗಬಹುದು. ಸಣ್ಣ ಮಕ್ಕಳು ತಮ್ಮ ಸ್ವಯಂ ಪೋಷಣೆಯ ಪರಿಶೋಧನೆ ನಡೆಸುವುದನ್ನು ಹಲವು ಪೋಷಕರು ಹಸಿವೆ ಕಡಿಮೆಯಾಗಿದೆ ಎಂದು ತಿಳಿದುಕೊಳ್ಳಬಹುದು. (ಉದಾ: ಮಕ್ಕಳು ತಿಂಡಿ ತೀರ್ಥಗಳನ್ನು ತಿಂದು ಊಟ ಕಡಿಮೆ ಮಾಡಬಹುದು.) ಕೆಲವು ಸ್ಥಿಮಿತ ಬಗೆಯ ಆಹಾರಗಳ ಬಗ್ಗೆ ಹೆಚ್ಚಿನ ಒಲವು ಹಾಗು ಇತರೆ ಆಹಾರಗಳನ್ನು ಪರಿಶೋಧಿಸಲು ಕೆಲವು ಮಕ್ಕಳಿಗೆ ಇಚ್ಛೆ ಇರುವುದಿಲ್ಲ. ಮನೆಯ ವಾತಾವರಣ ಹಾಗು ಮಾನಸಿಕ ಉದ್ವೇಗಗಳು ಮಗುವಿನ ಆಹಾರದ ರೀತಿ ಹಾಗೂ ಪ್ರಮಾಣದ ಮೇಲೆ ಪ್ರಭಾವ-ಬೀರುತ್ತವೆ. ಊಟದ ಸಮಯದಲ್ಲಿ ಮಾನಸಿಕ ಒತ್ತಡಗಳಿಂದ ಆಹಾರ ಹಾಗೂ ಊಟದ ಬಗ್ಗೆ ತಿರಸ್ಕಾರ ಭಾವನೆ ಹೊಂದಬಹುದು. ಕಡಿಮೆ ಹಸಿವಿನ ದೂರುಗಳು ಒಂದೆ ಮಗು, ವಯಸ್ಸಾದ ಪೋಷಕರ ಏಕಮಾತ್ರ ಮಗು, ಮಗುವಿನ ಮನೆಯಲ್ಲಿ ದಾಂಪತ್ಯ ವಿರಸಗಳು ಹಾಗು ಇತರೆ ಒತ್ತಡಗಳು ಇರುವಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ವೈದ್ಯರುಗಳು ದಾಕ್ಷಿಣ್ಯವಿಲ್ಲದೆ ಮಗು ಆರೋಗ್ಯವಾಗಿದೆ ಎಂಬ ಉತ್ತರ ಅಥವಾ ಟಾನಿಕ್‌ಗಳನ್ನು ನೀಡುವಿಕೆ ಈ ಕಡಿಮೆ ಹಸಿವಿನ ಸಮಸ್ಯೆಯನ್ನು ನೀಗಿಸಲಾರದು. ಪೋಷಕರಿಗೆ ಮಗುವಿನ ಆಹಾರದ ಬಗ್ಗೆ ಸಾಂತ್ವನ ನೀಡಿಕೆಯಿಂದ ಅವರ ಆತಂಕವನ್ನು ಶಮನಗೊಳಿಸಬಹುದು. ಜಠರ-ಕರುಳಿನ ಶಸ್ತ್ರ ಚಿಕಿತ್ಸೆ-ಯಾದ 1 ವರ್ಷದ ಮಕ್ಕಳಲ್ಲಿ ಆ ಹಾರ ನೀಡುವಿಕೆಯಲ್ಲಿ ವ್ಯತ್ಯಾಸವಾಗ ಬಹುದು. ಕಬ್ಬಿಣದ ಅಂಶ ಕೊರತೆ ಅಥವಾ ಗುಣವಾಗಬಲ್ಲ ಕಾಯಿಲೆಗಳಿಂದ ಬಳಲುವ ಔಷಧೋಪಚಾರಗಳಿಂದ ಆರೋಗ್ಯ ಸುಧಾರಿಸಿದರೆ ಮಕ್ಕಳಲ್ಲಿ ಸರಿಯಾದ ಹಸಿವು ವಾಪಸಾಗುತ್ತದೆ.

# ಸಂಸಾರ ಸಾಗರ

—ರಾಜೇಂದ್ರಶಿಶು, 242, ಉತ್ತರಾದಿಮಠದ ರಸ್ತೆ, ಮೈಸೂರು-4.

ಸಂಸಾರ ಸಾಗರದ ತೆರೆಕೊಬ್ಬಿ
ಮುಖದ ಮೇಲೆ ಅಲೆಯುತ್ತಿದೆ ನೋಡಾ;
ಸಂಸಾರ ಸಾಗರ ಉರದುದ್ದವೇ ಹೇಳಾ;
ಸಂಸಾಠ ಸಾಗರ ಕೊರಳುದ್ದವೇ ಹೇಳಾ;
ಸಂಸಾರ ಸಾಗರ ಶಿರದುದ್ದವಾದ ಬಳಿಕ
ಏನ ಹೇಳುವೆನಯ್ಯ ಅಯ್ಯಾ, ಅಯ್ಯಾ;
ಎನ್ನ ಹುಯ್ಯಲ ಕೇಳಯ್ಯ;
ಕೂಡಲಸಂಗಮದೇವ ನಾನೇವನೇವನಯ್ಯ;

ಅಣ್ಣನವರ ಈ ವಚನವನ್ನು ಓದುತ್ತ ಓದುತ್ತ ಆಲೋಚನೆಯ ಶರಧಿಯ ಹೊಕ್ಕಿದೆ ತಮ್ಮೆರಡು ಕಂಗಳಂತಿದ್ದ ಪೃಥ್ವಿಗಗ್ಗಳೆಯ ಚೆಲುವರಾದ ಈರ್ವರು ಪತ್ನಿಯರನ್ನ ಪಡೆದ ಬಸವಣ್ಣನೇ ಹೀಗೆಂದನಲ್ಲ. ಎನ್ನದಿರಿ ಲೋಕದ ಜನರ ಸ್ಥಿತಿಯ ಕಂಡು ಅಣ್ಣ ನುಡಿದ ಮಾತಿದು.

ಶರಣರು ನಿತ್ಯತೃಪ್ತಿಗಳು, ಅವರಿಗೆ ಯಾವ ಸಾಂಸಾರಿಕ ಬಂಧನವಾಗಲಿ ಮೋಹ ಪಾಶಗಳಾಗಲಿ ಇರಲಿಲ್ಲ ಮಮಕಾರ ತೊರೆದ ಅವರಿದ್ದ ತಾವೇ ಮಠವಾಗಿತ್ತು ಅಲ್ಲಿ ಸಂಗ್ರಹಿಸುವ ಭಾವವಿರಲಿಲ್ಲ. ನಾಳಿನ ಚಿಂತೆಯಿಲ್ಲ. ನಿತ್ಯತೃಪ್ತಿ ತುಂಬಿತ್ತು. ಅವರೆಲ್ಲ ಕಾಯಕದಿ ಕೈಲಾಸ ಕಂಡರು. ಇಳೆಗೆ ಅದನಿಳಿಸಿದ್ದರು. ಸತಿಪತಿಗಳೊಂದಾದ ಭಕ್ತಿ ಎಲ್ಲೆಡೆ ತುಂಬಿತ್ತು. ಪತಿ ತಪ್ಪಿದರೆ ಸತಿ ತಿದ್ದುವ ಉನ್ನತಿಕೆ ಇತ್ತು. ಇಂದಿನವರಂತೆ ಸಂಸಾರ ಕಾಲಲ್ಲಿ ಕಟ್ಟಿದ ಗುಂಡು ಕೊರಳಲ್ಲಿ ಕಟ್ಟಿದ ಬೆಂಡು ಆಗಿರಲಿಲ್ಲ. ಸಂಸಾರ ಶರಧಿಯ ದಾಟಿ ನಿಂತಿದ್ದರು. ನಾವು ಏಳಲಾಗದೆ ಮುಳುಗುತ್ತಿಹೆ ಎಂದು.

ಶರಣರು ಸಂಸಾರವನ್ನು ದೂರೀಕರಿಸಲಿಲ್ಲ. ಅಲ್ಲಿಯೇ ಇದ್ದು ಅದನ್ನು ಗೆದ್ದರು. ಈರ್ವರಲ್ಲೂ ಸಾಮರಸ್ಯತೆ ಇತ್ತು. ಒಂದು ಕಡೆ ದಾಸಿಮಯ್ಯ ದುಗ್ಗಳೆಯಂಥ ಪತ್ನಿಯನ್ನು ವಿವಾಹವಾಗಿ ತಾನು ಬದುಕಿದೆನೆನ್ನುತ್ತಾನೆ. ಈ ಭಾವದಲ್ಲಿ ಆತ ಹೇಳುತ್ತಾನೆ ಆಕೆ.

ಬಂದುದನರಿದು ಬಳಸುವಳು
ಬಂದುದ ಪರಿಣಾಮಿಸುವಳು
ಬಂಧುವರ್ಗವ ಮರೆಸುವಳು
ದುಗ್ಗಳೆಯ ತಂದು ಲದುರಿದೆನು, ಎಂದಿದ್ದಾರೆ.

ಇಂಥ ಪತ್ನಿಯನ್ನು ಪಡೆದುದರಿಂದಲೇ ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂಬ ನುಡಿ ಹೊರ ಹೊಮ್ಮಿತು ಆತನಿಂದ

ಒಮ್ಮೆ ಈರ್ವರು ಶಿವಗಣಂಗಳು ದಾಸಿಮಯ್ಯನನ್ನು ಕುರಿತ "ದಾಸಿಮಯ್ಯ" ಸಂಸಾರವು ಮೇಲೋ ಸಂನ್ಯಾಸವು ಮೇಲೋ ಎಂದು ಕೇಳಿದಾಗ ದಾಸಿಮಯ್ಯ ಅವರನ್ನು ಮನೆಗೆ ಕರೆತಂದು ದುಗ್ಗಳೆಯನ್ನು ಕೂಗುತ್ತಾರೆ. ಆ ತಾಯಿ ಕುಟ್ಟುತಿದ್ದ ವನಕೆಯನ್ನು ಅರ್ಧದಲ್ಲಿಯೇ ನಿಲ್ಲಿಸಿ ಓಡಿಬರುತ್ತಾಳೆ.

ಹಾಗೆ ಅವರು ವಸ್ತ್ರವನ್ನು ನೇಯುತ್ತಿದ್ದಾಗ ಬೆಳಕಿನ ಸಮಯದಲ್ಲಿ ಅಕೆಯನ್ನು ಕೂಗಿ ಸೂಜಿಗೆ ದಾರ ಪೋಣಿಸಲು ಕಾಣುತ್ತಿಲ್ಲ. ಕಂದೀಲು ತಾ ಎನ್ನುತ್ತಾರೆ, ಅಕೆ ಈಗ ಇಷ್ಟು ಬೆಳದರೆಯದಲ್ಲ ಎಂದೂ ಅನ್ನದೆ ಕಂದೀಲು ತಂದಿಡುತ್ತಾಳೆ. ರಾತ್ರಿ ಊಟಕ್ಕೆ ಕುಳಿತಾಗ ಅಲ್ಲಿ ತಣ್ಣಗಾಗಿರುವ ಅಂಬಲಿಯನ್ನೇ "ದುಗ್ಗಳೆ" ಅಂಬಲಿ ಬಹಳ ಬಿಸಿಯಾಗಿದೆ ಗಾಳಿ ಬೀಸು ಎಂದಾಗ ತನ್ನ ಸೆರಗಿನಿಂದ ಗಾಳಿ ಬಿಸುತ್ತಾಳೆ ಇದನ್ನು ನೋಡುತ್ತಿದ್ದ ಆ ಗಣಂಗಳಿಗೆ ಹೇಳುತ್ತಾರೆ ದುಗ್ಗಳೆಯಂತ ಪತ್ನಿ ಇದ್ದರೆ ಸಂಸಾರವೇ ಸುಖ" ಎಂದು.

ಅಂಥ ಪತ್ನಿ ಎಲ್ಲಿ ಸಿಗಬೇಕು. ಇಂದು ನಮ್ಮ ಸುತ್ತ ನೋಡಿದಾಗ ಒಮ್ಮೊಮ್ಮೆ ಭಯವಾಗುತ್ತದೆ. ಈ ಜನಾಂಗ ಇದೆತ್ತ ಸಾಗುತ್ತಿದೆ. ಇಬ್ಬರಲ್ಲೂ ಹೊಂದಾಣಿಕೆಯಿಲ್ಲದೆ ಸುಖಮಯ ಸಂಸಾರದಲ್ಲಿ ಕಿಚ್ಚನ್ನು ಹಚ್ಚಿಕೊಳ್ಳುತ್ತಿರುವವರಲ್ಲ ಎಂದು ಎಷ್ಟು ಸಂಸಾರಗಳಿಂದು "ಎತ್ತು ಏರಿಗೆ ಕೋಣ ನೀರಿಗೆ" ಎಂಬಂತೆ ಇವೆ. ನೊಂದ ಯುವಕನೊಬ್ಬ ಹೇಳುತ್ತಿದ್ದ ಮಾತು ನೆನಪಾಗುತ್ತಿದೆ. "ಎಲ್ಲರಿಗೂ ಒಳ್ಳೆಯ ಹೆಣ್ಣು ಸಿಗಬೇಕೆಂದು ಬಯಸಿದರೆ ಹೇಗೆ ನಮ್ಮ ಪಾಪಕ್ಕೆ, ಕರ್ಮಕ್ಕೆ ತಕ್ಕಂತೆ ಸಿಗುವರಷ್ಟೆ. ಒಳ್ಳೆಯ ಪತ್ನಿ ಸಿಕ್ಕರೆ ಸಂಸಾರಿಗಳಾಗ್ತೇವೆ. ಇಲ್ಲದಿದ್ದರೆ ಸಾಕ್ರಟೀಸನಂತೆ ತತ್ತ್ವ ಜ್ಞಾನಿಗಳಾಗ್ತೇವೆ; ಈ ಮಾತು ಎಷ್ಟು ಸತ್ಯ. ಆ ತೃಪ್ತಿ ಹೆಣ್ಣಿನಿಂದಲೇ ಸಾಕ್ರಟೀಸನಂಥ ತತ್ತ್ವಜ್ಞಾನಿ ಲೋಕಕ್ಕೆ ದೊರೆತದ್ದು ಅಲ್ಲವೆ.

ಸಾಕ್ರಟೀಸ್ ಒಮ್ಮೆ ತನ್ನ ಸ್ನೇಹಿತರೊಡನೆ ಯಾವುದೋ ಚರ್ಚೆ ಮಾಡುತ್ತ ಬಾಗಿಲಲ್ಲಿ ಕುಳಿತ್ತಿದ್ದನಂತೆ. ಒಳಗಡೆ ಒಂದೆ ಸಮ ದಡ ಬಡ ಸದ್ದು ಕೇಳುತಿತ್ತು. ಒಂದೇಸಮ ಮಾತು ಕೇಳುತಿತ್ತು ಆಗ ಆತನ ಸ್ನೇಹಿತ ಹೇಳಿದನಂತೆ. "ಸಾಕ್ರಟೀಸ್ ಏನಿದು ಸದ್ದು; ಎಂದು ಏನಿಲ್ಲ ಗುಡುಗು ಮಿಂಚಷ್ಟೆ-ಇನ್ನು ಸ್ವಲ್ಪ ಹೊತ್ತು ಕಳೆದಲ್ಲಿ ಮಳೆ ಬರಬಹುದು ಎಂದು. ಇನ್ನೊಬ್ಬ ಹೇಳಿದ ನಿನ್ನ ಪತ್ನಿ ಎಂಥ ಕೋಪಿಷ್ಠೆ ಎಂದಾಗ ಹಾಗೆನ್ನದಿರಿ ಅವಳು ಅಂಥವಳಾಗಿರುವುದರಿಂದಲೇ ಸಾಕ್ರಟೀಸ್ ತತ್ತ್ವಜ್ಞಾನಿಯಾದ ಇಲ್ಲದಿದ್ದಲ್ಲಿ ಇತರರಂತೆ ಸಂಸಾರಿಯಾಗುತಿದ್ದ ಎಂದನಂತೆ ನಗುತ್ತ

ಸರ್ವಜ್ಞ ಕವಿ ಹೇಳುವಂತೆ ಬೆಚ್ಚನ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯನರಿವ ಸತಿ ಇರಲು ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ.

ಅಂಥ ಸಂಸಾರ ಇಂದೆಲ್ಲಿ ಸಿಗಬೇಕು. ಶ್ರೀ ಸಿದ್ದೇಶ್ವರ ಸ್ವಾಮಿಗಳವರು ಹೇಳುತ್ತಿದ್ದ ಒಂದು ಮಾತು ನೆನಪಾಗುತ್ತಿದೆ.

ಈ ಸಂಸಾರ ಒಂದು ರೀತಿ ಚರ್ಮರೋಗ ಅಂದರೆ 'ತುರಿಕೆ' ಇದ್ದಂತೆ ಮೊದಲು ಕೆರೆಯುವಾಗ ಎಂಥಾದ್ದೋ ಸಮಾಧಾನ, ಸಂತಸ, ಕೆರೆಯುತ್ತ ವ್ರಣ ಗಾಯವಾದಾಗ ಆ ನೋವು ಸಹಿಸಲಸದಳ; ಅಂತೆ ಈ ಸಂಸಾರ, ಕಟ್ಟಿಕೊಂಡ ಪ್ರಾರಂಭದಲ್ಲಿ ಎಂಥದ್ದೋ ಸುಖ, ಸಮಾಧಾನ ಸ್ವರ್ಗವಿಳಿದಂತೆ ಆ ನಂತರ ಕೆಲವು ವರ್ಷಗಳು ಕಳೆದಮೇಲೆ ಆ ನೋವಿನ ಸ್ಥಿತಿ ಮೊದಲು ಎಂಥಾ ಮಜಾ ಇರುತ್ತದೆ ಅನಂತರ ಅಷ್ಟು ವ್ಯಥೆ ಇತ್ತದೆ ಅದರ ಮಾತು ಎಂಥ ಸತ್ಯ.

ಸಂಸಾರವನ್ನು ನಾವು ಹಿಡಿದುಕೊಂಡು ಸಾಹಿಸೆಯುಷ್ಟು ಸುಖಕ್ಕೆ ಸಾಗರದಷ್ಟು ದುಃಖ ಅನುಭವಿಸುತ್ತಲೇ ಇದರಿಂದ ಮುಕ್ತರಾಗಲು ಸಾಧ್ಯವಿಲ್ಲದಷ್ಟು ಬಂಧಿತರಾಗಿದ್ದೇವೇ. ಅದನ್ನು ಬಿಡಲುಯತ್ನಿಸುತ್ತಿಲ್ಲ. ನಮ್ಮ ಈ ಬಂದನದ ಬಗ್ಗೆ ನಮ್ಮ ಕಡೆ ಗಾದೆ ಹೇಳುತ್ತಾರೆ. ಸಂಸಾರ ಅನ್ನೋದು ಶೆಟ್ಟರು ಗೂಡಲ್ಲಿ ಕೈಯಿಟ್ಟಂಗೆ ಎಂದು ಒಬ್ಬ ಶೆಟ್ಟರು ಗೂಡಿಗೆ ಕೈಯಿಟ್ಟರು ಒಳಗಿದ್ದ ಚೇಳು ಕಚ್ಚಿತು. ಚೇಳು ಕಚ್ಚಿತು ಎಂದು ಬೇರೆಯವನಿಗೆ ಹೇಳಿದೆ ಎಂಥ ಬಾಗುಂದಿ ಎಂಥ ಬಾಗುಂದಿ ಎಂದರಂತೆ ಅದನ್ನು ಕೇಳಿ ಮತ್ತೊಬ್ಬ ಕೈಯಿಟ್ಟ ಆತನೂ ಹಾಗೆ ಎಂಥ ಬಾಗುಂದಿ ಎಂದ ಹೀಗೆ ಅನೇಕ ಚೇಳುಕಚ್ಚಿಸಿಕೊಂಡರಂತೆ. ಸಂಸಾರದ ಅನುಭವ ಹೀಗೆ ಎಂದು ಯಾರು ಯಾರಿಗೂ ಹೇಳಲಿಲ್ಲವಂತೆ ಅಂತೆ ಇಂದೂ ಅನೇಕರು ಅದರ ಸುಳಿಗೆ ಸಿಲುಕಿ ಆ ಬಂಧನದಿಂದ ಬಿಡಿಸಿಕೊಳ್ಳಲಾಗದೆ ತೊಳಲುತ್ತಿರುವುದು. ಸಂಸಾರವೆಂದಾಕ್ಷಣ ಭಯಪಡುವಂಥಿದ್ದು ಎಂದಲ್ಲ. ಅದನ್ನೆ ಸದಾ ಹೊತ್ತುಕೊಂಡರೆ ಭಾರವಾಗುತ್ತದೆ ಇಳಿಸಿದರೆ ಹಗುರ-ವಾಗುವುದಷ್ಟೆ. ಅದನ್ನು ಅಣ್ಣನವರು ಹೇಳಿದಾಗ ಅದನ್ನು ಹೊತ್ತರೆ ಅ ಸಾಗರ ಶಿರದುದ್ದವಾಗತ್ತದೆ, ಇಳಿಸಿದರೆ ಮೊಳಕಾಲುದ್ದವಾಗುತ್ತದೆ.

ಒಬ್ಬ ವ್ಯಕ್ತಿ ದಾರಿಯಲ್ಲಿ ಹೋಗುತ್ತಿದ್ದು ತಲೆಯ ಮೇಲೆ ತೂಕದ 3ಗಂಟಿತ್ತು. ಎದುರಿಗೆ ಭಗವಂತ ಬಂದುಕೇಳಿದ 'ತಮ್ಮ ನಿನ್ನ ತಲೆಯ ಮೇಲಿರುವುದೇನು? ಎಂದು ಆತ ಹೇಳಿದ. ನನಗೆ ಗೊತ್ತಿಲ್ಲ ಎಂದ ಹಾಗಾದರೆ ಅದನ್ಯಾಕೆ ಹೊರತ್ತಿರುವೆ. ಕೆಳಗಿಳಿಸು ಎಂದ ಭಗವಂತ ಅಯ್ಯೊ ಅದನ್ನು ಇಳಿಸುವಂತಿಲ್ಲ 'ಎಂದ ಪಥಿತ, ಯಾಕೆ? ಕೇಳಿದ ಭಗವಂತ ಈ ಗಂಟುಗಳನ್ನು ನನ್ನ ತಾತನು ಹೊತ್ತಿದ್ದರು ನನ್ನ

ತಂದೆಯು ಹೊತ್ತಿದ್ದರು. ಅವರು ಅದರಲ್ಲಿ ಏನಿದೆ ಎಂದು ನೋಡಲಿಲ್ಲ ಭಾರವೆಂದು ಕೆಳಗೆ ಇಳಿಸಲಿಲ್ಲ. ನಾನೇಕೆ ಇಳಿಸಲಿ ಎಂದ ಪಥಿಕ ಆಗ ಭಗವಂತ ಹೇಳಿದ ಆಗಲಿ ಮೊದಲು ನೀನು ಒಂದು ಕೆಲಸಮಾಡು ಅದ ನಿಲ್ಲಿಳಿಸು ಒಳಗೇನಿದೆ ನೋಡು ಏನಾದರು ಇದ್ದಲ್ಲಿ ಹೊರು ಬೇಡ ಎನ್ನೆನು ಇಲ್ಲದಿದ್ದಲ್ಲಿ ಅದನ್ನಿಳಿಸು ಆರಾಮವಾಗಿ ನಡೆ ಎಂದ ಭಗವಂತ. ಆದರೆ ಆ ಮನುಷ್ಯ ಕೇಳಲೇ ಇಲ್ಲ ಇಂದಿನ ವರೆಗೂ ತನ್ನ ತಾತ ಹೊತ್ತ ತಂದೆ ಹೊತ್ತ ತಾನು ಹೊತ್ತ ಸಂಸಾರದ ಗಂಟನ್ನು ಹೊರುತ್ತಲೇ ಬಂದಿದ್ದಾನೆ. ಕಷ್ಟಪಡುತ್ತಲೆ ಬಂದಿದ್ದಾನೆ. ಭಗವಂತ ಹೇಳಿದಂತೆ ಕ್ಷಣ ಇಳಿಸಿ ಆರಾಮವಾಗಿರುವ ಮನ ಇನ್ನು ಬಂದಿಲ್ಲ.

ಇದನ್ನಿಳಿಸಿ ಚಿಂತೆಯಿಂದ ಮುಕ್ತರಾಗಬಾರದೆಕೆ ಶರಣರ ಸೂಳ್ನುಡಿ ಬೇಕೇ ಬೇಕು. ನಾವೆಲ್ಲ ಕಾಂಚಾನವೆಂಬ ನಾಯ ಮೆಚ್ಚಿ ದೇವನನ್ನು ಮರೆತಿದ್ದೇವೆ. ನನಗೆ ನನ್ನ ಸಂಸಾರಕ್ಕೆಂದು ತಳಮಳಿಸುತ್ತ ಇದ್ದೇವೆ, ಇದನ್ನೆ ಅಣ್ಣನವರು

ಗುಬ್ಬಿ ಹೆರವರ ಮನೆಯು ತನ್ನದೆಂಬಂತೆ
ಧರೆ, ಧಿನವನಿತೆ ಎಮ್ಮವರೆಂದು
ಹೋರಿ ಹೋರಿ ಸಾವುತ್ತದೆ ಜೀವ-ಇಷ್ಟಕ್ಕೆ

ಸದಾ ಮುಳುಗಿರುತ್ತೇವೆ. ಅಲ್ಲಿಹುವುದು ನಮ್ಮನೆ ಇಲ್ಲಿ ಬಂದೆವು ಸುಮ್ಮನೆ ಎಂಬುದನ್ನು ಮರೆತು ಒಡಲವಸರಕ್ಕೆ ಐಹಿಕ ಸುಖದಲ್ಲಿ ಮುಳುಗಿದ್ದೇವೆ ಇಂಥವರೇ ಇಂದು ಹೆಚ್ಚು. ಇದರಿಂದ ಮುಕ್ತರಾದವರು ಶರಣರು ಮತ್ತು ಸಂತರು ಮಾತ್ರ

ಅವರ ನುಡಿಗಡಣದತ್ತ ದೃಷ್ಠಿ ಹರಿಸಿ ಇದರ ಅನಿತ್ಯತೆ ಅರಿತು ನಡೆದಲ್ಲಿ ಸಂಸಾರವೆಂಬ ಸರ್ಪಕಚ್ಚದು. ಸಂಸಾರ ಸಾಗರದ ಅಲೆ ನಮ್ಮನ್ನು ಅಪ್ಪಳಿಸುವುದು ತಪ್ಪುತ್ತದೆ



# ಹಾಗಲವಾಡಿ ಅರಸು ಮನೆತನ, ಆಕರಗಳು, ಶಾಸನ-ಶಾಸನೇತರ ಸಾಮಗ್ರಿ

ಡಿ. ವಿ. ಪರಮಶಿವಮೂರ್ತಿ, ಸಂಶೋಧಕರು, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ,
ಬೆಂಗಳೂರು ವಿ. ವಿ. ಬೆಂಗಳೂರು-56

ವೀರಶೈವ ಅರಸು ಮನೆತನಗಳ ಅಧ್ಯಯನದಲ್ಲಿ ತುಮಕೂರು ಜಿಲ್ಲೆಯ ಹಾಗಲ ವಾಡಿ ಅರಸರ ಚರಿತ್ರೆ ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಈಗ ಗುಬ್ಬಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿರುವ ಹಾಗಲವಾಡಿಯು ತನ್ನ ಒಡಲಲ್ಲಿ ಸುಮಾರು 200 ವರ್ಷಗಳ ಆಳ್ವಿಕೆಯ ಇತಿಹಾಸವನ್ನು ಹೊಂದಿದೆ. ಈ ಹಾಗಲ ವಾಡಿ ಅರಸರ ಪ್ರಾರಂಭದ ರಾಜಧಾನಿ ಚಿಕ್ಕನಾಯಕನಹಳ್ಳಿಯಾಗಿದ್ದು, ನಂತರ ಕ್ರಿ. ಶ. 1608 ರಲ್ಲಿ ಹಿರಿಮುದಿಯಪ್ಪ ನಾಯಕನು ಆನೆಗೊಂದಿ ಮೂಲದವನಾದ ಕರಿಯನಾಯಕ ಎಂಬುವನಿಂದ ಹಾಗಲದಹಳ್ಳಿಯನ್ನು ವಶಪಡಿಸಿಕೊಂಡು ಅಲ್ಲಿ ಕೋಟೆಕೊತ್ತಲಗಳನ್ನು ಕಟ್ಟಿಸಿದನು. ಇದರಿಂದ ಹಾಗಲದಹಳ್ಳಿ ಹಾಗಲವಾಡಿ ಆಯಿತು, (ಎಂ. ಎಸ್. ಪು.: ಹಾಗಲವಾಡಿ ಪಾಳೆಗಾರರ ಚರಿತ್ರೆ. ಪುಟ 10) ಈ ಮನೆತನದ ಒಂಬತ್ತನೇ ದೊರೆಯಾದ ಇಮ್ಮಡಿ ಮುದಿಯಪ್ಪನಾಯಕನನ್ನು "ಕನ್ನಡ ನಾಡಿನ ಅಶೋಕ" ಎಂದರೂ ಉತ್ಪ್ರೇಕ್ಷೆಯಾಗಲಾರದು. ಇವನ ವ್ಯಕ್ತಿತ್ವ ಬಹಳ ಅಪರೂಪವಾದದ್ದು. ಇವನ ಚರಿತ್ರೆಯಿಂದಲೇ ಹಾಗಲವಾಡಿ ಪಾಳೆಯ ಪಟ್ಟಿನ ಚರಿತ್ರೆ ಇತರೆ ಪಾಳೆಪಟ್ಟುಗಳ ಚರಿತ್ರೆಗಿಂತ ಭಿನ್ನವಾಗಿರುವುದು.

ಆದರೆ ಇಂತಹ ಒಂದು ಉತ್ತಮವಾದ ಪಾಳೆಯಪಟ್ಟಿನ ಅಧ್ಯಯನಕ್ಕೆ ಹೊರ ಟಾಗ ದೊರಕುವ ಆಕರಗಳು ಬಹಳ ಮಿತವಾದುದಾಗಿದೆ. ಈ ಅಕ್ಷರಗಳಿಂದಲೂ ತಿಳಿಯುವ ಚರಿತ್ರೆ ಅಲ್ಪ ಸ್ವಲ್ಪ. ಈ ಮನೆತನದ ಅಧ್ಯಯನಕ್ಕೆ ದೊರೆಯುವ ಎಲ್ಲಾ ಅಕ್ಷರಗಳನ್ನು ಸ್ಥೂಲವಾಗಿ ಶಾಸನಗಳು ಮತ್ತು ಶಾಸನೇತರ ಅಕ್ಷರಗಳು ಎಂದು ವಿಭಜಿಸಬಹುದು.

## 1. ಶಾಸನಗಳು :

ಈ ಮನೆತನದ ಅಧ್ಯಯನಕ್ಕೆ ಸಿಗುವ ಶಾಸನ ಆಕರಗಳು ಬಹಳ ಕಡಿಮೆ. ಒಟ್ಟು ಏಳು ಶಾಸನಗಳು ದೊರಕುತ್ತವೆ. ವಸ್ತುವಿನ ದೃಷ್ಟಿಯಿಂದ ಮೂರು ತಾಮ್ರ ಶಾಸನಗಳು, ಮೂರು ಶಿಲಾಶಾಸನಗಳು ಮತ್ತು ಒಂದು ಢಮರುಗದ ಮೇಲಿನ ಶಾಸನವಾಗಿದೆ. ವಿಷಯದ ದೃಷ್ಟಿಯಿಂದ ಎಲ್ಲವೂ ದಾನ ಶಾಸನಗಳೇ ಆಗಿವೆ. ಇವುಗಳನ್ನು ಕಾಲಾನುಕ್ರಮಣಿಕೆಯಲ್ಲಿ ಈ ಕೆಳಗಿನಂತೆ ವಿವೇಚಿಸಲಾಗಿದೆ.

ಕ್ರಿ. ಶ, 1623ರ (ಫಬ್ರವರಿ 17, ಸೋಮವಾರ) ಒಂದು ಶಾಸನವು ಚಿಕ್ಕನಾಯಕನಹಳ್ಳಿ ತಾಲ್ಲೂಕು ಜೋಗಿಹಳ್ಳಿಯ ದಳವಾಯಿ ಮಠದಲ್ಲಿ ಇದೆ. ಈ ಶಾಸನದ ಪ್ರಕಾರ ಮುದಿಯಪ್ಪನಾಯಕನು ಚಿಕ್ಕನಾಯಕನಹಳ್ಳಿ ಪಟ್ಟಣದಲ್ಲಿ ಆಳುತ್ತಿದ್ದು, ಇವನ ದಳವಾಯಿಯಾದ ಶೀಲವಂತ ವಿರಕ್ತ ಪರಮಪ್ಪನು ನಂದೀಶ್ವರಸ್ವಾಮಿ ಎಂಬುವರಿಗೆ ಒಂದು ಮಠವನ್ನು ಕಟ್ಟಿಸಿ ಜೊತೆಗೆ ತೋಟ ಮತ್ತು ಕೆರೆಯನ್ನು ಕಟ್ಟಿಸಿದಾನ ನೀಡುತ್ತಾನೆ, ಹಾಗು ಈ ಮಠದಲ್ಲಿ ವೀರಮಾಹೇಶ್ವರರ ಭಕ್ತರು ಮಾತ್ರ ಇರಬೇಕು. ಎಂದು ಆಜ್ಞೆ ಮಾಡುತ್ತಾನೆ. ಇದಕ್ಕೆ ಸಂಬಂಧಿಸಿದ ವಾಕ್ಯ ಹೀಗಿದೆ. ಈಮಠದಲ್ಲಿ ಸಮಸ್ತ ಪದಾರ್ಥವನ್ನು ಶಿವಾರ್ಪಣ ಮಾಡುವಂಥ ಸತ್ಪುರುಷ ಮಹೇಶ್ವರರೇ ಇರುವರು. ಅನಾರ್ಪಿತವ ಮಾಡಿ ಕೆಡುಸುವಂತ ಲಂಡುಪುಂಡರು ಇದ್ದರೇ ವೀರಮಾಹೇಶ್ವರರು ಒಡೆಯರು ಭಕ್ತರು ವಿಚಾರಿಸಿಕೊಂಡು ಅಂಥ ಲಂಡುಪುಂಡರ ತೆಗೆದು ಸತ್ಪುರುಷರಯಿರಿಸುವುದು. ಎಂದು ಹೇಳಿದೆ. ಈ ದಾನಕ್ಕೆ ಪೂರಕವಾಗಿ ಅಕ್ಷಯ ಸಂವತ್ಸರದಲ್ಲಿ ಮುದಿಯಪ್ಪನಾಯಕನು ಭೋಗಸಮುದ್ರ ಎಂಬ ಗ್ರಾಮವನ್ನು ಉಂಬಳಿಯಾಗಿ ನೀಡುತ್ತಾನೆ. ಇಲ್ಲಿನ ಇನ್ನೊಂದು ಸ್ವಾರಸ್ಯವಾದ ಸಂಗತಿಯೆಂದರೆ ಮೊದಲು ಮಠ ಕಟ್ಟಿಸಿ ದಾನ ನೀಡಿದ ಶೀಲವಂತಪರಮಪ್ಪನ ಅಭಿಲಾಷೆಯಂತೆ ಈ ಮಠದಲ್ಲಿ ವೀರಮಾಹೇಶ್ವರರು ಇರಬೇಕು. ಎಂದು ಮುದಿಯಪ್ಪನಾಯಕನ ಮಗ ಇಮ್ಮಡಿ ಭೈರಪ್ಪನಾಯಕನು ಮತ್ತೊಮ್ಮೆ ಆಜ್ಞೆಮಾಡಿದ್ದಾನೆ. ಈ ಆಜ್ಞೆಯಿಂದ ನಾವು ಆ ಮಠದಲ್ಲಿ ವಾಸ್ತವ್ಯಕ್ಕಾಗಿ ವೀರಮಾಹೇಶ್ವರರಲ್ಲದವರು ಪ್ರಯತ್ನಿಸಿರಬಹುದು, ಆಗ ಭೈರಪ್ಪನಾಯಕನು ಈ ಶಾಸನವನ್ನು ಹಾಕಿಸಿದ್ದಾನೆ ಎಂದು ಊಹಿಸಲಾಗಿದೆ. ಹೀಗೆ ಈ ಒಂದು ಶಾಸನದಲ್ಲೇ ಮೂರು ವ್ಯಕ್ತಿಗಳ ಅಭಿಪ್ರಾಯಗಳನ್ನು ನೋಡಬಹುದು. ಅಲ್ಲದೆ ಹಾಗಲವಾಡಿ ಅರಸರ ಕಾಲದ ವೀರಮಾಹೇಶ್ವರ ಹಾಗೂ ಇತರರ ಸ್ಥಿತಿಗತಿ ಅರಿಯಲು ಈ ಶಾಸನ ಕಿಂಚಿತ್ತು ಮಾಹಿತಿಯನ್ನು ನೀಡುತ್ತದೆ. ಅಲ್ಲದೆ ಈ ಶಾಸನದ ಕಾಲದ ಪ್ರಕಾರ ಹಾಗಲವಾಡಿ ಪಾಳೆಯಗಾರರ ಚರಿತ್ರೆಯಲ್ಲಿ ನೀಡಿರುವ ಮುದಿಯಪ್ಪನಾಯಕನ ಕಾಲದ ಗಡಿಯನ್ನು ಕ್ರಿ.ಶ. 1618ರ ಬದಲು ಕ್ರಿ.ಶ. 1623ರ ಎಂದು ಬದಲಾಯಿಸಬಹುದು.

ಕ್ರಿ.ಶ. 1625 ರ ಮತ್ತೊಂದು ಶಾಸನವು (ಇ.ಸಿ. 15 ಟಿಪಿ 102) ಮುದಿಯಪ್ಪನಾಯಕನು ಗುರುಬಸವರಾಜದೇವರಿಗೆ ಹಟ್ನದಲ್ಲಿ (ಈಗ ತುರುವೇಕೆರೆ ತಾಲೂಕು ಒಂದು ಮಠವನ್ನು ಕಟ್ಟಿಸಿ ದಾನವನ್ನು ನೀಡಿದ ವಿಷಯವನ್ನು ತಿಳಿಸುತ್ತದೆ. ಇದೊಂದು ಒಂಬತ್ತು ಸಾಲಿನ ಚಿಕ್ಕದಾದ ಶಾಸನ.

ಕ್ರಿ.ಶ.ಸು. 1626ರ ಮತ್ತೊಂದು ಶಾಸನದಲ್ಲಿ ಮುದಿಯಪ್ಪನಾಯಕನ ಮಗಳು ಮತ್ತು ಬೈರಪ್ಪನಾಯಕನ ಹೆಂಡತಿ ಚೆನ್ನಾಜಿಯಮ್ಮ ಎಂಬುವಳು ಬೋಯಿನಾಯಕ ಎಂಬುವನಿಗೆ ಶೀಲವಂಥಪುರವನ್ನು ಉಂಬಳಿಯಾಗಿನೀಡಿದ ವಿಷಯುವಿದೆ. ಈ ಶಾಸನ-

ದಲ್ಲಿ ಉಲ್ಲೇಖವಾಗಿರುವ ಭೈರಪ್ಪನಾಯಕ ಯಾರು? ಎಂಬ ಅನುಮಾನ ಉಂಟಾಗುತ್ತದೆ. ನಮಗೆ ಸಿಕ್ಕಿರುವ ಎಲ್ಲ ದಾಖಲೆಗಳ ಪ್ರಕಾರ ಹಿರಿಯ ಮುದಿಯಪ್ಪನಾಯಕನ ಮರಣಾನಂತರ ಅವನ ಮಗ ಇಮ್ಮಡಿ ಭೈರಪ್ಪನಾಯಕನು ಕ್ರಿ.ಶ. 1623 ರಲ್ಲಿ ಪಟ್ಟಕ್ಕೆ ಬರುತ್ತಾನೆ. ಆದರೆ ಈಶಾಸದ ಪ್ರಕಾರ ಮುದಿಯಪ್ಪನಾಯಕ ಮತ್ತು ಭೈರಪ್ಪನಾಯಕರು ಮಾವ ಹಾಗೂ ಅಳಿಯರಾಗಿದ್ದಾರೆ. ಈ ಶಾಸನದಲ್ಲಿ ಈ ರೀತಿ ಹೇಳಿಕೆ ಇದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ

ಕ್ರಿ..ಶ. 1639ರ (ನವೆಂಬರ್, ದಿನಾಂಕ: ) ಅವಧಿಯ ಇಮ್ಮಡಿ ಭೈರಪ್ಪನಾಯಕನ ಮತ್ತೊಂದು ಶಾಸನವು ಲಕ್ಷ್ಮಣಾಚಾರ್ಯ ಎಂಬುವನಿಗೆ ಕಂದಿಕೆರೆ ಎಂಬ ಗ್ರಾಮವನ್ನು ಧಾನ ನೀಡಿದ ವಿವರಣೆಯನ್ನು ಹೊಂದಿದೆ. (ಇ.ಸಿ. 16 ; ಸಿಕೆ 53) ಈ ಶಾಸನವು ಆ ಕಾಲದಲ್ಲಿ ರೂಢಿಯಲ್ಲಿದ್ದ ಭೂಮಿಯ ಅಳತೆಯ ವಿಧಗಳನ್ನು ತಿಳಿಸುತ್ತದೆ. ಅಲ್ಲದೆ ಹಾಗಲವಾಡಿ ಅರಸರನ್ನು ಅಮರನಾಯಕತನಕ್ಕೆ ಪ್ರತಿಪಾಲಿಸಿಕೊಟ್ಟ ಹೊಯ್ಸಳ ದೇಶದ ಯರೇಕಟ್ಟೆ ಶಾಸನಾಂಕಿತರಾದ ಗೋವಲಗೋತ್ರದವರು ಎಂದು ಹೇಳಿದೆ.

ಇದರ ನಂತರ ಕ್ರಿ.ಶ. 1730 ರ (ಮಾರ್ಚ್ 9, ಸೋಮವಾರ) ಎರಡನೇ ಮುದಿಯಪ್ಪನಾಯಕನ ಕಾಲದ ಒಂದು ಶಾಸನವು ಹಿಂದಿನ ಮೂರು ತಲೆಮಾರಿನವರನ್ನು ಉಲ್ಲೇಖಿಸಿದೆ. (ಇಸಿ 12 : ಸಿಕೆ 38) ಹಾಗಲವಾಡಿ ಶಾಸನಸ್ಥ ಮೊದಲ ದಾಖಲೆ ಈ ಶಾಸನದಲ್ಲಿ ದೊರೆಯುತ್ತದೆ. ಹಾಗಲವಾಡಿ ಸ್ಥಳದ ಆಸೆಹಳ್ಳಿ ಎಂಬ ಗ್ರಾಮವನ್ನು ರಾಮಯ್ಯ ಎಂಬುವನಿಗೆ ದಾನ ನೀಡಿದ ವಿವರಗಳು ಇದರಲ್ಲಿವೆ. ಅಲ್ಲದೆ ಈ ವೇಳೆಯಲ್ಲೇ ಅಣೆಹಳ್ಳಿ ತೋಪಿನಲ್ಲಿ ಹೊಸದಾಗಿ ಮಠ ಕಟ್ಟಿಸಿದ ವಿವರವಿದೆ. ಹಾಗಲವಾಡಿ ಅರಸು ಮನೆತನ ಚರಿತ್ರೆಯಲ್ಲಿ ಈಶಾಸನ ಮುಖ್ಯವಾಗಿದೆ. ಶ್ರೀ ಬಿ.ಎಲ್. ರೈಸ್ ಅವರು ಇ.ಸಿ.12ರ ಮುನ್ನುಡಿಯಲ್ಲಿ ಮತ್ತು ಶಾಸನದ ಇಂಗ್ಲಿಷ್ ಭಾಷಾಂತರ ನೀಡಿರುವಲ್ಲಿ ಶಾಸನದ ಕಾಲವನ್ನು ಶಕ 1591 ಎಂದು ತಪ್ಪಾಗಿ ನೀಡಿದ್ದಾರೆ. (ಇಸಿ. 12:ಪುಟ 5 ಮತ್ತು 144). ಇದರ ಪ್ರಕಾರ ಈ ಶಾಸನದ ಕಾಲ. 1669 ಆಗುತ್ತದೆ. ಆದರೆ ಕ್ರಿ.ಶ. 1669ರಲ್ಲಿ ಎರಡನೆ ಮುದಿಯಪ್ಪನಾಯಕ ಇನ್ನು ಪಟ್ಟಕ್ಕೆ ಬಂದಿರಲಿಲ್ಲ. ಈ ಕಾಲದಲ್ಲಿ ಚನ್ನಬಸಪ್ಪನಾಯಕ ಎಂಬುವನು ಆಳುತ್ತಿರುತ್ತಾನೆ. ಆದರೆ ಇದೇ ರೈಸರವರು ಕನ್ನಡದ ಪಾಠದಲ್ಲಿ "ಶಾಲಿವಾಹನ ಶಕ ವರುಷಂಗಳು 1651ನೇ ವರ್ತಮಾನಕ್ಕೆ ಸಲ್ಲುವ ಸೌಮ್ಯನಾಮ ಸಂವತ್ಸರದ ಚೈತ್ರ ಶುದ್ಧ ಸೋಮವಾರದಲ್ಲಿ........." ಎಂದು ಸ್ಪಷ್ಟವಾಗಿ ನೀಡಿದ್ದಾರೆ. ಇದರ ಪ್ರಕಾರ ಈ ಶಾಸನದ ಕಾಲ ಕ್ರಿ. 1730, ಮಾರ್ಚ್ 23, ಸೋಮವಾರ ಆಗುತ್ತದೆ ಈ ಕಾಲ ಯಾವುದೇ ಅನುಮಾನಕ್ಕೆಡೆಗೊಡದೆ ಇಮ್ಮಡಿ ಮುದಿಯಪ್ಪನಕಾಲಕ್ಕೆ ಹೊಂದುತ್ತದೆ. ಹೀಗೆ

ಹಿರಿಯರು ಮಾಡಿದ ಒಂದು ತಪ್ಪಿನಿಂದಾಗಿ ಹಾಗಲವಾಡಿ ಅರಸರ ಬಗೆಗೆ ಬರೆದ ಎಲ್ಲ ವಿದ್ವಾಂಸರು ಕ್ರಿ.ಶ. 1669 ಎಂದೇ ಉಲ್ಲೇಖ ಮಾಡಿ ಇದರ ಬಗ್ಗೆ ಕೆಲವರು ಅನುಮಾನ ವ್ಯಕ್ತಪಡಿಸಿದ್ದಾರೆ. ಇದರಿಂದ ಯಾರೂ ಕನ್ನಡದ ಮೂಲ ಪಾಠವನ್ನು ಗಮನಿಸಿಲ್ಲವೆಂಬುದು ತಿಳಿದು ಬರುತ್ತದೆ.

ಕ್ರಿ.ಶ.ಸು. 1745ರ ಮತ್ತೊಂದು ಎರಡು ಸಾಲಿನ ಶಾಸನವೊಂದು ದೊರಕ್ಕಿದ್ದು ಇದು ದುರ್ಗದ ಮುರುಘಾಮಠದಲ್ಲಿರುವ ಢಮರುಗ ವೊಂದರ ಮೇಲೆ ಕೆತ್ತಲಾಗಿದೆ. (ಶ್ರೀ ಲಕ್ಷ್ಮಣ ತೆಲಗಾವಿ, ಢಮರುಗ: ಜಂಗಮಜ್ಯೋತಿ: ಪುಟ 5।) ಈ ಶಾಸನದಿಂದ ಹಾಗಲವಾಡಿ ಅರಸರಿಗೂ ಹಾಗೂ ಚಿತ್ರದುರ್ಗ ಮತ್ತು ನಾಡಿನ ಇತರೆ ಭಾಗಗಳ ವೀರಶೈವ ಮಠಗಳಿಗೂ ಅನ್ಯೋನ್ಯ ಸಂಬಂಧವಿತ್ತು, ಹಾಗೂ ಆಶೀರ್ವಾದವನ್ನು ಪಡೆದಿದ್ದರು ಎಂದು ತಿಳಿಯುತ್ತದೆ.

ಈ ಅರಸರ ಕಡೆಯ ಶಾಸನವು ಪ್ರಸನ್ನ ರಾಮಪ್ಪನಾಯಕನಿಗೆ ಸೇರಿದ್ದು, ಇದರಕಾಲ ಕ್ರಿ.ಶ. 1763 (ಆಗಸ್ಟ್ 1ನೇ ಸೋಮವಾರ) ಆಗಿದೆ. (ಎಂ.ಎಸ್.ಪು. ಹಾಗಲವಾಡಿ ಪಾಳೆಗಾರರ ಚರಿತ್ರೆ ಅನುಭಂದ.) ಈ ಶಾಸನದ ಪಾಠವನ್ನು ಶ್ರೀ ಎಂ.ಎಸ್. ಪುಟ್ಟಣ್ಣನವರು ತಮ್ಮ ಕೃತಿಯಲ್ಲಿ ಸಂಕ್ಷೇಪವಾಗಿ ನೀಡಿದ್ದಾರೆ. ಇದೂಸಹ ದಾನ ಶಾಸನವಾಗಿದ್ದು ಸೀತಾರಾಮಯ್ಯ ಎಂಬುವನಿಗೆ ಪ್ರಸನ್ನ ರಾಮಪ್ಪನಾಯಕ ರಯ್ಯನವರು ಹಾಗಲವಾಡಿ ಸೀಮೆಯ ಮೂಗನಾಯಕನ ಕೋಟೆ ಹೋಬಳಿಯ ಇಡಕನಹಳ್ಳಿ, ಮತ್ತಿಕೆರೆ ಹಾಗೂ ಹೊಸಹಳ್ಳಿ ಎಂಬ ಮೂರು ಗ್ರಾಮವನ್ನು ದಾನ ನೀಡಿ ಆ ಗ್ರಾಮಗಳ ನಾಲ್ಕು ದಿಕ್ಕಿಗೂ ವಾಮನ ಮುದ್ರೆಕಲ್ಲುಗಳನ್ನು ನೆಡಿಸಿದ ವಿಷಯವಿದೆ. ಪಾಳೆಗಾರರ ಚರಿತ್ರೆ ಕೃತಿಯಲ್ಲಿ ಈ ರಾಜನ ಕಾಲವನ್ನು ಕ್ರಿ.ಶ.1753 ರಿಂದ 1756ರ ವರೆಗೆ ಎಂದು ನೀಡಲಾಗಿದೆ. ಆದರೆ ಈ ಶಾಸನದಲ್ಲಿನ "ಸ್ವಸ್ತಿಶ್ರೀ ವಿಜಯಾಭ್ಯುದಯ ಶಾ.ಶ. 1685ನೇ ವರ್ಷಮಾನದ ಸ್ವಭಾನು ಸಂ............ಎಂಬ ಹೇಳಿಕೆಯು ಆಧಾರದಿಂದ ಇವನ ಕಾಲವನ್ನು ಕ್ರಿ.ಶ. 1763ರ ವರೆಗೆ ಎಂದು ಹೇಳ ಬೇಕಾಗುತ್ತದೆ.

ಹೀಗೆ ಈ ಅರಸರ ಕಾಲದ ಶಾಸನಗಳು ಅವರ ಧಾರ್ಮಿಕ, ಸಾಮಾಜಿಕ ಹಾಗೂ ಆಡಳಿತಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ಸಂಕ್ಷಿಪ್ತವಾಗಿ ಮತ್ತು ನಿಖರವಾಗಿ ಹೇಳುತ್ತಾ ಮುಖ್ಯ ಆಕರಗಳಾಗುತ್ತದೆ.

2. **ಶಾಸನೇತರ ಆಕರಗಳು :** ಶಾಸನೇತರ ಆಕರಗಳನ್ನು ಸಮಕಾಲೀನ ಸಾಹಿತ್ಯ ವಂಶಾವಳಿ ಚರಿತ್ರೆಗಳು, ಸ್ವತಂತ್ರ ಕೃತಿಗಳು, ಬಿಡಿಲೇಖನಗಳು ಮತ್ತು ಕ್ಷೇತ್ರಕಾರ್ಯ ಎಂಬ ವಿಭಾಗಗಳನ್ನಾಗಿ ಮಾಡಲಾಗಿದೆ.

(ಅ) **ಸಮಕಾಲೀನ ಸಾಹಿತ್ಯ:** ಹಾಗಲವಾಡಿ ಅರಸರನ್ನು ಉಲ್ಲೇಖಿಸುವ ಮೊಟ್ಟಮೊದಲ ಕವಿ ಕ್ರಿ. ಶ. 1623 ರ ಕಾಲದ ಸೋಸಲೆ ರೇವಣಾಚಾರ್ಯ. ಈತನು ಮಹಿಮ್ನಸ್ತವ, ವೀರಶೈವ ಸಿದ್ಧಾಂತಶಿಖಾಮಣಿ, **ಶಿವಾಧಿಕ್ಯಶಿಖಾಮಣಿ,** ಸದ್ಗುರು-ರಗಳೆಗಳಿಗೆ ಕನ್ನಡ ವ್ಯಾಖ್ಯಾನವನ್ನು, ಶಾರೀರ **ಪ್ರಕೃತಿಕ,** ಅಂತಃಕರಣ ಪ್ರಕಾಶಿಕೆ ಮುಂತಾದ ಹಲವು ಗ್ರಂಥಗಳನ್ನು ಬರೆದಿರುವಂತೆ ಕವಿಚರಿತೆಕಾರರು ತಿಳಿಸುತ್ತಾರೆ. ಇವನು ಮಹಿಮ್ನಸ್ತವ ಟೀಕೆಯನ್ನು ಚಿಕ್ಕನಾಯಕಪುರದ **ಅರಸನಾದ** ಮುದಿನಾ-ಯಕನ ಸಂತೋಷಾರ್ಥವಾಗಿ ಸೋಮಶೇಖರಯೋಗಿ ತನ್ನಿಂದ ಮಾಡಿಸಿದಂತೆ ಹೇಳುತ್ತಾನೆ. (ಕರ್ನಾಟಕ ಕವಿ ಚರಿತೆ ಸಂ. 2, ಪುಟ 320) ಈ ಹೇಳಿಕೆಯಿಂದ ಹಿರಿಮುದಿಯಪ್ಪನಾಯಕನ. ವೀರಶೈವ ಸಾಹಿತ್ಯಕ್ಕೆ ಪ್ರೋತ್ಸಾಹವನ್ನು ನೀಡುತ್ತಿದ್ದ ಅಂಶ **ತಿಳಿ**ಯುತ್ತದೆ.

ಕ್ರಿ. ಶ. ಸು1700 ರಲ್ಲಿ ಹಾಗಲವಾಡಿ ಸಿದ್ಧರಾಮಪ್ಪನಾಯಕ ಎಂಬುವನು ಮಹಾನುಭಾವ ಪ್ರಕಾಶಿಕೆಯನ್ನು ಬರೆದಿದ್ದಾನೆ. ಕವಿ ಚರಿತೆಗಾರರು ಈ ಕವಿಯು ಹಾಗಲವಾಡಿಯ ಪಾಳೆಯಗಾರರ ಸಂತತಿಗೆ ಸೇರಿದವನೆಂದು ಊಹಿಸಿದ್ದಾರೆ. ಡಾ|| ವೀರಣ್ಣ ರಾಜೂರ ಅವರು ಈ ಕವಿಯನ್ನು ಕ್ರಿ.ಶ. 1671 ರಿಂದ 1701ರ ವರೆಗೆ ಆಳಿದ ಹಾಗಲವಾಡಿ ದೊರೆ ರಾಮಪ್ಪನಾಯಕನೇ ಎಂದು ಹೇಳುತ್ತಾರೆ. (ಹಾಗಲವಾಡಿ ಮುದ್ವೀರಸ್ವಾಮಿಯ ಸ್ವರವಚನಗಳು, ಪುಟ11). ಇದರಿಂದ ಹಾಗಲವಾಡಿ ದೊರೆಗಳು ಸ್ವತಃ ಕವಿಗಳೂ ಆಗಿದ್ದರು ಎಂಬ ಅಂಶ ದೊರೆಯುತ್ತದೆ.

ಕ್ರಿ. ಶ. ಸು. 1740 ರ ಕಾಲದ "ನೂರೊಂದ" ಎಂಬ ಕವಿ "ಸೌಂದರಕಾವ್ಯ" ಎಂಬ ಕಾವ್ಯ ರಚಿಸಿರುವನು. ಈ ಕಾವ್ಯದಲ್ಲಿ ನಂಜರಾಜ (ಕಳಲೆ ಪ್ರಭು)ನ ಆಸ್ಥಾನಕ್ಕೆ "ಚಿಕ್ಕನಾಯಕನಹಳ್ಳಿ ಮುದ್ದುರಾಜರ್ಯ ಬಂದ್ದಿದ್ದನು" ಎಂಬ ಹೇಳಿಕೆಯಿ ದೆ.

ಮುಂದೆ ಹೇರಂಬಕವಿಯ (ಕಿ.ಶ. 1719-1761) ಸಿದ್ಧಲಿಂಗೇಶ್ವರ ಸಾಂಗತ್ಯ ಎಂಬ ಕೃತಿಯಲ್ಲಿ ಕ್ರಿ. ಶ. 1508 ರಿಂದ 1544 ರ ವರೆಗೆ ಆಳಿದ ಶಾಲಿನಾಯಕನ ಪ್ರಸ್ತಾಪ (19-23) ಕ್ರಿ. ಶ. 1578 ರಿಂದ 1623 ರ ವರೆಗೆ ಆಳಿದ ಮುದಿಯಪ್ಪ ನಾಯಕನು ಸಿದ್ಧಲಿಂಗೇಶ್ವರಸ್ವಾಮಿಯನ್ನು ಹಾಗಲವಾಡಿಗೆ ಕರೆತಂದು ಅವರನ್ನು ಮೆರವಣಿಗೆ ಮಾಡುವ ಸನ್ನಿವೇಶ. ಆಸಮಯದಲ್ಲಿ ಜನಗಳ ಉಲ್ಲಾಸ ಮೊದಲಾದವನ್ನು ನೈಜವಾಗಿಯೇ ನಿರೂಪಿಸಿದ್ದಾನೆ. (19-41), ಕ್ರಿ.ಶ. 1544 ರಿಂದ 1578ರವರೆಗೆ ಆಳಿದ ಭೈರಪ್ಪನಾಯಿಕನಿಗೆ ಸಿದ್ಧಲಿಂಗೇಶ್ವರನು ಕೃಪೆಗೈದು ದೊರೆತನವಿತ್ತ ವಿಷಯ (21-30) ಅಲ್ಲದೆ 23ನೇ ಸಂಧಿಯಲ್ಲಿ ಹಾಗಲವಾಡಿ ದೊರೆಗಳಿಗೆ ಮತ್ತೆ ದರುಶನವನ್ನು ನೀಡಿ ಲಿಂಗಣ್ಣಾರ್ಯನೆಂಬ ಕೃತ್ತಿಮ ದ್ರೋಹಿಯ ಭಂಗಿಸಿದ ಎಂಬ ಉಲ್ಲೇಖವಿದೆ. (23-38) ಈ ಲಿಂಗಣ್ಣಾರ್ಯ ಯಾರು ಎಂಬ ಬಗ್ಗೆ ಏನೂತಿಳಿದು ಬರುವುದಿಲ್ಲ.

ಈ ಕೃತಿಯಲ್ಲಿ ನಿರೂಪಿಸಿರುವ ಘಟನೆಗಳಿಂದ ಸಿದ್ಧಲಿಂಗಯತಿಗಳಿಗೂ ಹಾಗಲವಾಡಿ ಅರಸುಗಳಿಗೂ ನಿಕಟವಾದ ಸಂಬಂಧವಿತ್ತು. ಎಂಬ ಅಂಶ ಗೋಚರಿಸುತ್ತದೆ.

ಕ್ರಿ. ಶ. 18ನೇ ಶತಮಾನದಲ್ಲಿ ಚನ್ನವೀರ ಎಂಬ ಕವಿಯು 'ಮುದ್ದೀರ ತಾರಾವಳಿಯನ್ನು ರಚಿಸಿದ್ದು, ಇದರ ಪ್ರಕಾರ ಹಾಗಲವಾಡಿ ದೊರೆ ಮುದಿಯಪ್ಪ ನಾಯಕನಿಗೂ, ಎಡೆಯೂರು ಸಿದ್ದಲಿಂಗಯತಿಗೂ ಹಾಗೂ ಮುದ್ದೀರಸ್ವಾಮಿಗಳಿಗೂ ಇದ್ದ ಸಂಬಂಧ ತಿಳಿದು ಬರುತ್ತದೆ. ಇದರ ಸಂಪಾದಕರಾದ ಶ್ರೀಯುತ ಎಸ್. ಶಿವಣ್ಣನವರು 'ಮುದಿಯಪ್ಪನಾಯಕನು ಬೆಂಗಳೂರಿಗೆ ನಿಯೋಗ ಕಳಿಸಿ ಮುದ್ದೀರ ಸ್ವಾಮಿಗಳನ್ನು ಹಾಗಲವಾಡಿಗೆ ಕರೆಸಿಕೊಂಡನು. ಅವರಿಗೆ ಧ್ಯಾನಮಂಟಪವನ್ನು ರಚಿಸಿಕೊಟ್ಟು ಅವರ ಐಕ್ಯದ ನಂತರ ದಾಸೋಹ ರಥೋತ್ಸವ ಮೆರವಣಿಗೆಗಳನ್ನು ನಡೆಸಿದನು. ಎಂದು ಸಮರ್ಥಿಸಿದ್ದಾರೆ. (ಚನ್ನವೀರ ಮುದ್ದೀರ ತಾರಾವಳಿ. ಎಸ್. ಶಿವಣ್ಣ, ಸತ್ಯ ಶುದ್ಧ ಕಾಯಕ 2-1-2 ಪು10ಸ.) ಈ ತಾರಾವಳಿಯಲ್ಲಿ ಸಿದ್ಧಲಿಂಗ ಯತಿಗಳ ಹೇಳಿಕೆಯಂತೆ ಹಾಗಲವಾಡಿ ಮುದಿಯಪ್ಪನಾಯಕನು ಬೆಂಗಳೂರಿಗೆ ನಿಯೋಗ ಕಳಿಸುವುದು, ಅವರು ಬರುವಾಗ ಪಟ್ಟಣವನ್ನು ಸಿಂಗರಿಸುವುದು, ಹಾಗಲ ವಾಡಿಯ ವೈಭವ, ಪುರದಮಧ್ಯ ಗೋಸ್ಯಸ್ಥಲದಿ ಧ್ಯಾನ ಮಂಟಪ ರಚಿಸಿಕೊಡುವುದು ಸ್ವಾಮಿಗಳು ಲಿಂಗೈಕ್ಯರಾದಾಗ ಮೆರವಣಿಗೆ ನಡೆಸುವ ಸನ್ನಿವೇಶ, ದಾಸೋಹ ಮಾಡುವ ಸನ್ನಿವೇಶವನ್ನು ಚಿತ್ರಸಿದ್ದಾನೆ. "ಕವಿಕರ್ಣ ರಸಾಯನ" ಎಂಬ ಕೃತಿಯಲ್ಲೂ ಮುದಿಯಪ್ಪನಾಯಕನ ಉಲ್ಲೇಖವಿದೆ. ಅಲ್ಲದೆ ಗುಬ್ಬಿಯ ಕವಿಯಾದ ಚೀಲಾಳ ಸ್ವಾಮಿಯ ಒಂದು ಕೃತಿಯಲ್ಲೂ ಈ ಅರಸರ ಪ್ರಸ್ತಾಪವಿದೆ. ಹೀಗೆ ಹಲವಾರು ಸಾಹಿತ್ಯ ಕೃತಿಗಳಿಂದ ಹಾಗಲವಾಡಿ ಪಾಳೆಗಾರರ ಕೆಲವು ವಿಷಯಗಳನ್ನು ತಿಳಿಯ ಬಹುದಾಗಿದೆ.

**ಅ) ವಂಶಾವಳಿ ಚರಿತ್ರೆಗಳು**: "ಹಾಗಲವಾಡಿ ಪಾಳೆಯಗಾರರ ಚರಿತೆ" ಯನ್ನು ದಿವಂಗತ ಎಂ. ಎಸ್. ಪುಟ್ಟಣ್ಣನವರು 1931ರಲ್ಲಿಯೂ, ಹಾಗಲವಾಡಿ ಅರಸುಗಳ ವೃತ್ತಾಂತವನ್ನು ದಿವಂಗತ ಪ. ಕೈ. ಹಳಕಟ್ಟಿಯವರು 1932ರಲ್ಲಿಯೂ ಪ್ರಕಟಿಸಿದ್ದಾರೆ. ಈ ಎರಡು ಆಕರಗಳು ಹಾಗಲವಾಡಿ ಅರಸರ ಬಗ್ಗೆ ವಿವರವಾದ ಮಾಹಿತಿಗಳನ್ನು ನೀಡುತ್ತದೆ. ಮೇಲ್ಕಂಡ ಎರಡರಲ್ಲೂ ಹದಿಮೂರು ತಲೆಮಾರುಗಳ ಕಾಲಾನು ಕ್ರಮಣಿಕೆಯ ಇತಿಹಾಸವನ್ನು ನಿರೂಪಿಸಲಾಗಿದೆ. ಆದರೆ ಕೆಲವು ಅಂಶಗಳಲ್ಲಿ ಎರಡರಲ್ಲಿಯೂ ವ್ಯತ್ಯಾಸವಿದೆ. ಎರಡು ಚರಿತ್ರೆಗಳಲ್ಲೂ ಮೂಲ ಪುರುಷ ಏರಿ ಮಾದನಾಯಕನೇ ಆದರೂ, ಅವನು ಸಾಲಿಗ್ರಾಮವನ್ನು ಸಂಪಾದಿಸುವ ರೀತಿ ಬೇರೆ ಬೇರೆಯಾಗಿದೆ ಶ್ರೀ ಪುಟ್ಟಣ್ಣನವರ ಕೃತಿಯಲ್ಲಿ ಲಕ್ಷ್ಮೀನರಸಯ್ಯನೆಂಬ ಬ್ರಾಹ್ಮಣನು ದೊರೆಯ ಬಳಿ ಕೆಲಸಕ್ಕೆ ಸೇರಿಕೊಂಡು ತನ್ನ ಬಳಿಯಿದ್ದ ಸಾಲಿಗ್ರಾಮವನ್ನು ದೊರೆ

ಗಳಿಗೆ ನೀಡುತ್ತಾನೆ. ಶ್ರೀ ಹಳಕಟ್ಟಿ ವೃತ್ತಾಂತದಲ್ಲಿ ದೊರೆಯು ಡಂಬಳದ ಕಡೆಯಿಂದ ಬಂದ ದೇಸಾಯಿಯು ಬಳಿ ಸಾಲಿಗ್ರಾಮವನ್ನು ಕಿತ್ತುಕೊಳ್ಳುತ್ತಾನೆ. ಶ್ರೀ ಪುಟ್ಟಣ್ಣನವರ ಕೃತಿಯಲ್ಲಿ ಏರಿಮಾದನಾಯಕನ ಮಗ ನೆಲ್ಲೂರನಾಯಕನೆಂದೂ ಈ ವಿಷಯ ಗೆಝೆಟಿಯರನಲ್ಲಿ ತಪ್ಪಾಗಿದೆಯೆಂದು ವಾದಿಸುತ್ತಾರೆ. ಎರಡೂ ಚರಿತ್ರೆಗಳಲ್ಲೂ ಕೆಲವು ರಾಜರ ಕಾಲದ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಅವುಗಳನ್ನು ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| ನಾಯಕರ ಹೆಸರು | ಶ್ರೀ ಎಂ.ಎಸ್.ಪು. | ಶ್ರೀ ಫ.ಕೈ.ಹ. |
|---|---|---|
| 1. ಚನ್ನಬಸಪ್ಪನಾಯಕ | ಕ್ರಿ.ಶ. 1646-1671 | ಕ್ರಿ.ಶ. 1646-1673 |
| 2. ರಾಮಪ್ಪನಾಯಕ | ,, 1971-1701 | ,, 1673-1704 |
| 3. ಚನ್ನಬಸಪ್ಪನಾಯಕ | ,, 1701-1720 | ,, 1704-1725 |
| 4. ಮುದಿಯಪ್ಪನಾಯಕ | ,, 1720-1740 | ,, 1725-1746 |
| 5. ಮುದ್ದುವೀರಪ್ಪನಾಯಕ | ,, 1740-1753 | ,, 1746-1760 |
| 6. ರಾಮಪ್ಪನಾಯಕ | ,, 1753-1756 | ,, 1760-1762 |
| 7. ಚನ್ನಬಸಪ್ಪನಾಯಕ | ,, 1756-1775 | ,, 1762-1775 |

ಇದರಲ್ಲಿ ಫ.ಕೈ ಹ. ನೀಡಿರುವ ಕಾಲವೇ ಶಾಸನಗಳಿಗೆ ಹತ್ತಿರವಾಗಿವೆ. ಎಲ್ಲ ಆಧಾರಗಳಿಂದ ಹಿರಿಯ ಮುದ್ದಪ್ಪನಾಯಕನ ಕಾಲ ಕ್ರಿ.ಶ. 1578-1623 ಎಂದು ರಾಮಪ್ಪನಾಯಕನ ಕಾಲ ಕ್ರಿ.ಶ. 1753-1763 ಎಂದು ನಿಸ್ಸಂಶಯವಾಗಿ ಹೇಳಬಹುದು.

ಈ ಮೇಲ್ಕಂಡ ವ್ಯತ್ಯಾಸಗಳನ್ನು ಗಮನಿಸಿದರೆ ಇಬ್ಬರಿಗೂ ಬೇರೆ ಬೇರೆ ವಂಶಾವಳಿ ಚರಿತ್ರೆಯೇ ದೊರಕಿರಬೇಕು ಎನಿಸುತ್ತದೆ. ಪುಟ್ಟಣ್ಣನವರು ಹಳಕಟ್ಟಿಯವರಿಗಿಂತ ವಿಸ್ತಾರವಾದ ವಿವರಗಳನ್ನು ನೀಡಿದ್ದಾರೆ. ಅಲ್ಲದೆ ಕೆಲವು ಕಡೆ ತಮ್ಮ ವಿಮರ್ಶಾತ್ಮಕ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಒಟ್ಟಿನಲ್ಲಿ ಮೇಲ್ಕಂಡ ಎರಡು ವಂಶಾವಳಿ ಚರಿತ್ರೆಗಳಿಂದಲೂ ನಾವು ಹಾಗಲವಾಡಿ ಅರಸರ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ತಿಳಿಯಬಹುದು.

ಕ್ರಿ.ಶ. 1614ರ ಕಾಲದ ಒಂದು ಕಾಗದದ ದಾನ ಪತ್ರ ದೊರಕಿದೆ. ಇದರಲ್ಲಿ ಮುದಿಯಪ್ಪನಾಯಕ ಪೂರ್ವಿಕರ ಬಗ್ಗೆ ದಾಖಲೆಯಿದೆ. ಇದರಲ್ಲಿಯು ಕಾಲದ ನಿರ್ದೇಶನವು ಭಿನ್ನರೀತಿಯಲ್ಲಿದ್ದು, ವಂಶಾವಳಿಯ ರಚನೆಗೆ ಅನುಕೂಲವಾಗುತ್ತದೆ.

ಇ) ಸ್ವತಂತ್ರ ಕೃತಿಗಳು : ಈ ನಾಳೆಯುಪಟ್ಟಿಗೆ ಸಂಬಂಧಿಸಿದಂತೆ ಎರಡು ಕೃತಿ

ಗಳು ಪ್ರಕಟವಾಗಿದೆ. ಮೊದಲನೆಯದು 1985ರಲ್ಲಿ ಪ್ರಕಟವಾದ ಡಾ॥ ಸುಜಾತರವರ ಹಾಗಲವಾಡಿ ಪಾಳೆಯಗಾರರು ಐಬಿಎಚ್ : ಬೆಂಗಳೂರು-1985) ಈ ಪುಸ್ತಕದಲ್ಲಿ ಲೇಖಕಿಯರ ಸ್ವಂತ ಅಭಿಪ್ರಾಯಗಳೇನೂ ಇಲ್ಲದೆ ಪುಟ್ಟಣ್ಣನವರ ವಂಶಾವಳಿ ಚರಿತ್ರೆಯನ್ನೇ ಸಂಕ್ಷೇಪಿಸಿದ್ದಾಗಿದೆ. ಅಲ್ಲದೆ ಇದು ಮಕ್ಕಳಿಗಾಗಿ ಬರೆದಿರುವುದರಿಂದ ಹಲವಾರು ಮಿತಿಗಳನ್ನು ಹೊಂದಿದೆ. ಎರಡನೆಯ ಕೃತಿ ಶ್ರೀ ಎಂ ಸೀಲಪ್ಪ ಅವರು ರಚಿಸಿರುವ "ರಾಜರ್ಷಿ" ಎಂಬ ಸಣ್ಣ ಕಾದಂಬರಿ. ಇದೊಂದು ಪ್ರಶಂಸಾರ್ಹವಾದ ಪ್ರಯತ್ನವಾಗಿದೆ. ಇಮ್ಮಡಿ ಮುದಿಯಪ್ಪನಾಯಕನನ್ನು ಕೇಂದ್ರವ್ಯಕ್ತಿಯಾಗಿ ಚಿತ್ರಿಸುತ್ತಾ ಅವನ ವ್ಯಕ್ತಿತ್ವವನ್ನು ಬಹಳ ಉತ್ತಮವಾಗಿ ಸಾಹಿತ್ಯಲೋಕಕ್ಕೆ ಪರಿಚಯಿಸಿದ್ದಾರೆ. ತಮ್ಮ ಕಥಾರಚನೆಗೆ ಆಧಾರವಾಗಿ ಹಲವಾರು ಐತಿಹಾಸಿಕ ದಾಖಲೆಗಳನ್ನು ಸ್ಥಳೀಯ ಹೇಳಿಕೆಗಳನ್ನು ಆದರಿಸಿ ವಾಸ್ತವತೆಯ ಚೌಕಟ್ಟನ್ನಾಕಲು ಪ್ರಯತ್ನಿಸಿದ್ದಾರೆ. ಪ್ರಕಾಶನ. ಬೆಂಗಳೂರು : 1987.

### (ಈ) ಬಿಡಿ ಲೇಖನಗಳು :

1918ರಲ್ಲಿ ಶ್ರೀ ಆರ್. ನರಸಿಂಹಾಚಾರ್ ರವರು ಎಂ.ಎ ಆರ್.ನಲ್ಲಿ ಸಣ್ಣದಾದ ಟಿಪ್ಪಣಿಯನ್ನು (ಎಂಎಆರ್ 1918 ಪುಟ 63) 1943ರಲ್ಲಿ ಪ.ಕೈ. ಹಳಕಟ್ಟಿಯವರ ಹಾಗಲವಾಡಿ ರಾಜರು ಎಂಬ ಲೇಖನ (ಶಿವಾನುಭವ. 1943. 17.12) 1943 ಬಿ.ಶಿವಮೂರ್ತಿಶಾಸ್ತ್ರಿಗಳು ಶರಣಸಾಹಿತ್ಯ 8-12-1946ರಲ್ಲಿ ಪ್ರಸ್ತಾವ. ಗೆಜೆಟಿಯರ್ ಪುಟ 40).

1970ರಲ್ಲಿ ಕರ್ನಾಟಕ ಸರ್ಕಾರ ಪ್ರಕಟಿಸಿದ ಕರ್ನಾಟಕ ಪರಂಪರೆ ಭಾಗ-2ರಲ್ಲಿ ಸಂಕ್ಷಿಪ್ತವಾಗಿಯೂ (ಪುಟ 205),

1970ರಲ್ಲೇ ಡಾ: ಎಂ ವಿ. ಕೃಷ್ಣರಾವ್ ಇತರರು ಬಹಳ ಸಂಕ್ಷಿಪ್ತವಾಗಿ (ಕರ್ನಾಟಕ ಇತಿಹಾಸ ದರ್ಶನ, ಪುಟ 494),

1975ರಲ್ಲಿ ಶ್ರೀ ಲಕ್ಷ್ಮಣತೆಲಗಾವಿಯವರು ಮುದ್ದೀರಪ್ಪನಾಯಕನ ಒಂದು ಹೊಸ ಶಾಸನ ವನ್ನು ಪ್ರಕಟಿಸಿ ಅದರ ಹಿನ್ನೆಲೆಯಲ್ಲಿ ಹಾಗಲವಾಡಿ ಅರಸರ ಸಂಕ್ಷಿಪ್ತ ಇತಿಹಾಸವನ್ನು (ಥಮರುಗ ಶಾಸನ : ಜಂಗಮ ಜ್ಯೋತಿ : ಪುಟ 51),
1975 ರಲ್ಲಿ ಶ್ರೀ ಎಂ. ಎಸ್. ಬಸವರಾಜಯ್ಯರು 'ಕವಿಕರ್ಣರಸಾಯನ' ಕೃತಿಯ ಪೀಠಿಕೆಯಲ್ಲಿ ಹಾಗಲವಾಡಿ ಅರಸರ ಬಗ್ಗೆ ಪ್ರಸ್ತಾಪಿಸಿದ್ದಾರೆ.

1977ರಲ್ಲಿ ಡಾ: ಎಂ. ಎಂ. ಕಲುಬುರ್ಗಿಯವರಿಂದ ಸಂಪಾದಿತವಾದ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ ಎಂಬ ಕೃತಿಯಲ್ಲಿ ಈ ಅರಸರ ಉಲ್ಲೇಖವನ್ನು (ಪುಟ)

1981ರಲ್ಲಿ ಶ್ರೀ ಲಕ್ಷ್ಮಣತೆಲಗಾವಿಯವರಿಂದ ವಿಸ್ತಾರವಾದ ಲೇಖನ (ಸಿದ್ದ ಗಂಗಾಶ್ರೀ ಪುಟ 1046), 1982ರಲ್ಲಿ ಶ್ರೀ ಎ.ವಿ. ವೆಂಕಟರತ್ನಂ ಅವರು ಚಿಕ್ಕನಾಯ-ಕನಹಳ್ಳಿ ಪಾಳೆಯಗಾರರು ಲೇಖನ ಪ್ರಕಟಣೆ ಸರ್ವೋದಯ ಪಥ 1982)

1986ರಲ್ಲಿ ಡಾ: ವೀರಣ್ಣರಾಜೂರ ಅವರಿಂದ ಸಂಪಾದಿತವಾದ ಮುದ್ವೀರ ಸ್ವಾಮಿಯ ಸ್ವರವಚನಗಳ ಕೃತಿಯ ಮುನ್ನುಡಿಯಲ್ಲಿ ವಿಸ್ತಾರವಾಗಿ (ಹಾಗಲವಾಡಿ ಮುದ್ವೀರಸ್ವಾಮಿಯ ಸ್ವರವಚನಗಳು : ಪ್ರಸ್ತಾವನೆ),

1991ರಲ್ಲಿ ಶ್ರೀ ಎಸ್. ಶಿವಣ್ಣ ಅವರಿಂದ ಪ್ರಕಟಿಶವಾದ ಚನ್ನವೀರನಮುದ್ದೀರ ತಾರಾವಳಿ ಲೇಖನದಲ್ಲಿ ಕೆಲವು ಅಂಶಗಳ ಪ್ರಸ್ತಾಪವನ್ನು (ಸತ್ಯಶುದ್ಧ ಕಾಯಕ ಸಂಪುಟ 2-1.2 ಪುಟ 105), ಮಾಡಲಾಗಿದೆ. ಹೀಗೆ ಬಿಡಿ ಲೇಖನಗಳಿಂದಲೂ ಹೆಚ್ಚಾಗಿ ಮಾಹಿತಿಗಳು ಹಾಗಲವಾಡಿ ಅರಸರ ಬಗ್ಗೆ ದೊರೆಯುತ್ತವೆ. ಈ ಮೇಲಿನ ಲೇಖನಗಳಲ್ಲದೆ ಅಲೆಕ್ಸಿಸ್‌ಕೆರೆಲ್ ಎಂಬುವರ "ಅವ್ಯಕ್ತ ಮಾನವ" ಎಂಬ ಕೃತಿಯಲ್ಲಿಯೂ ಕೆಲವು ವಿಷಯಗಳು ದೊರೆಯುತ್ತವೆ.

**ಉ) ಕ್ಷೇತ್ರಕಾರ್ಯ:** ಹಾಗಲವಾಡಿಯ ಪಾಳೆಯಪಟ್ಟಿನ ಚರಿತ್ರೆಯನ್ನು ತಿಳಿಯಲು ಬರಹದ ದಾಖಲೆಗಳ ಜೊತೆಗೆ ಕ್ಷೇತ್ರಕಾರ್ಯವನ್ನೂ ಮಾಡಬೇಕಾಗುತ್ತದೆ. ಹಾಗಲ ವಾಡಿಯಲ್ಲಿನ ಜನಗಳಲ್ಲಿ ಬಳಕೆಯಿರುವ ಹೇಳಿಕೆಗಳು ಮತ್ತು ಅವರು ತಿಳಿಸುವ ಹತ್ತಾರು ಮಠಗಳ ಹೆಸರುಗಳು ಗದ್ದುಗೆಯ ಹೆಸರುಗಳು ನಮಗೆ ಕಂಡುಬರುತ್ತದೆ. ಬಿಸಿಲು ಮಲ್ಲಪ್ಪ, ಕತ್ತಲೆ ಮಲ್ಲಪ್ಪ, ಗುರುಪಾದೇಶ್ವರ, ಶಾಂತೇಶ್ವರ, ಮುದ್ವೀರಸ್ವಾಮಿ ಗದ್ದುಗೆಗಳು ಇಂದಿಗೂ ನೋಡಲು ಸಿಗುತ್ತವೆ. ಆದರೆ ಇವುಗಳ ಸ್ಥಿತಿ ಇಂದು ಶೋಚನೀಯವಾಗಿವೆ. ಈ ಊರಿನ ಸುತ್ತ ಮುತ್ತಲೂ ಸುಮಾರು 15 ರಷ್ಟು ಲಿಂಗಮುದ್ರೆ ಕಲ್ಲುಗಳಿದ್ದು ಅರಸರ ದಾನ ಕಾರ್ಯಗಳ ಪ್ರತೀಕಗಳಾಗಿ ನಿಂತಿವೆ. ಈ ಪ್ರದೇಶದಲ್ಲಿ ಮೂರು ವೀರಗಲ್ಲುಗಳು ದೊರಕಿದ್ದು ಎರಡು ಗಂಗರ ಕಾಲದ್ದು ಮತ್ತೊಂದು ಹೊಯ್ಸಳ ವೀರಬಲ್ಲನ ಕಾಲದ್ದಾಗಿದ್ದು ಮೂರು ಹಂತಗಳಿಂದ ಕೂಡಿದೆ. ಊರಿನ ಸುತ್ತಲು ಭದ್ರವಾದ ಕೋಟೆಯ ಗೋಡೆಯ ಕುರುಹುಗಳಿವೆ. ಕೋಟೆಯ ಮುಖ್ಯ ಬತೇರಿ ಮತ್ತು ಎರಡು ಪ್ರಮುಖ ದ್ವಾರಗಳು ಇಂದಿಗೂ ಭದ್ರವಾಗಿ ನಿಂತಿವೆ. ಪೂರ್ವದ ಬಾಗಿಲು ಉತ್ತಮವಾದ ರಚನೆಯಿಂದ ಕೂಡಿದ್ದು ಆಕರ್ಷಕವಾಗಿದೆ. ಇಲ್ಲಿನ ಗದ್ದುಗೆಗಳು, ಮಠಗಳ ಅವಶೇಷಗಳು, ದೇವಾಲಯಗಳು ಮೊದಲಾದ ಸಾಕ್ಷಿಗಳಿಂದ

ಹಾಗಲವಾಡಿ ಅರಸು ಮನೆತನದವರ ಧಾರ್ಮಿಕ ಪ್ರೋತ್ಸಾಹ ಹಾಗೂ ಸಾಹಿತ್ಯಿಕ ಪ್ರೋತ್ಸಾಹವನ್ನು ತಿಳಿಯಬಹುದು. ಈ ರೀತಿಯಾಗಿ ಹಾಗಲವಾಡಿ ಮನೆತನದ ಅಧ್ಯಯನಕ್ಕೆ ಶಾಸನ ಆಕರಗಳಿಗಿಂತಲೂ ಶಾಸನೇತರ ಆಕರಗಳೇ ಮುಖ್ಯವಾಗಿ ನೆರವಾಗುತ್ತವೆ.

## ಅನುಬಂಧ

### ಹಾಗಲವಾಡಿ ಅರಸರ ವಂಶಾವಳಿ (ಪರಿಷ್ಕೃತ)

| | |
|---|---|
| ಎರಿಮಾದನಾಯಕ | 1524–1554 |
| ಸಾಲಿನಾಯಕ | 1554–1580 |
| ಭೈರವನಾಯಕ | 1580-1637 |
| ಹಿರಿಮುದಿಯಪ್ಪನಾಯಕ | 1637–1650 |
| ಇಮ್ಮಡಿ ಭೈರಪ್ಪನಾಯಕ | 1650–1678 |
| ಚೆನ್ನಬಸಪ್ಪನಾಯಕ | 1678–1693 |
| ರಾಮಪ್ಪನಾಯಕ | 1693-1704 |
| ಚೆನ್ನಬಸಪ್ಪನಾಯಕ | 1704-1725 |
| ಇಮ್ಮುಡಿ ಮುದಿಯಪ್ಪನಾಯಕ | 1725-1746 |
| ಮುದ್ದುವೀರಪ್ಪನಾಯಕ | 1746–1760 |
| ಪ್ರಸನ್ನರಾಮಪ್ಪನಾಯಕ | 1760–1763 |
| ಇಮ್ಮುಡಿ ಚೆನ್ನಬಸಪ್ಪನಾಯಕ | 1763-1775 |
| ಮುಮ್ಮುಡಿ ಮುದಿಯಪ್ಪನಾಯಕ | 1775–1776 |



ಸ್ಥಾಪನೆ : 1943

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288

ತಂತಿ : 'ವೀರಶೈವ'

ಕೇಂದ್ರ ಕಛೇರಿ : { 72866 / 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

| | |
|---|---|
| 1993-94 ನೇ ಸಾಲಿನಲ್ಲಿ ಷೇರು ಬಂಡವಾಳ : | ಸದಸ್ಯರಿಂದ ರೂ. 7.08 ಲಕ್ಷ |
| | ಸರ್ಕಾರದಿಂದ ರೂ. 13.42 ಲಕ್ಷ |
| | ಒಟ್ಟು ರೂ. 20.50 ಲಕ್ಷ |

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :
   ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
   ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
   ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
   ಉಪಾಧ್ಯಕ್ಷರು

—: ನಿರ್ದೇಶಕರು :—

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
   ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
   ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
   ಉಪನಿಬಂಧಕರ ಕಛೇರಿ,
   ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
   ಪ್ರಧಾನ ವ್ಯವಸ್ಥಾಪಕರು

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ
ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ
ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ
ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ
ಸುಯಿಧಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ
ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

" SIDDAGNGA " MONTHLY Reg No KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ-572104.